# ಬದಲಾಗುತ್ತಿರುವ ಕೃಷಿ ಆರ್ಥಿಕತೆ : ಕುಂದಾಪುರ ತಾಲೂಕಿನ ಒಂದು ಅಧ್ಯಯನ

ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

(ಅಭಿವೃದ್ಧಿ ಅಧ್ಯಯನ)

ಸಾದರಪಡಿಸಿದ ನಿಬಂಧ

ನೊಂದಣಿ ಸಂಖ್ಯೆ : ೧೬೧೧೧೧೦೩೦೦೪

ಮಾನ್ಯತೆ : ಕರ್ನಾಟಕ ಥೀಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು-೫೭೫೦೦೧

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೨೦೦೭

# ಬದಲಾಗುತ್ತಿರುವ ಕೃಷಿ ಆರ್ಥಿಕತೆ : ಕುಂದಾಪುರ ತಾಲೂಕಿನ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ

(ಅಭಿವೃದ್ಧಿ ಅಧ್ಯಯನ)

ಸಾದರಪಡಿಸಿದ ನಿಬಂಧ

ನೊಂದಣಿ ಸಂಖ್ಯೆ: ೧೬೧೧೧೧೦೩೦೦೪೯

೨೦೧೭

ಕರ್ನಾಟಕ ಥೀಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು-೫೭೫೦೦೧

## ಬದಲಾಗುತ್ತಿರುವ ಕೃಷಿ ಆರ್ಥಿಕತೆ : ಕುಂದಾಪುರ ತಾಲೂಕಿನ ಒಂದು ಅಧ್ಯಯನ

## ಅಧ್ಯಾಯದ ವಿವರಗಳು

## ಕೋಷ್ಟಕಗಳು ಮತ್ತು ನಕ್ಷೆಗಳ ಪಟ್ಟಿ

## <u>ನಕ್ಷೆಗಳು</u>

# ಭೂಪಟಗಳು ಮತ್ತು ಕೃಷಿ ಚಟುವಟಿಕೆಗಳ ಚಿತ್ರಗಳು

# ಅಧ್ಯಾಯ-೧

## ಪೀಠಿಕೆ, ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ೧.೧. ಪೀಠಿಕೆ

ಭಾರತ ಮೂಲತಃ ಕೃಷಿ ಪ್ರಧಾನ ದೇಶವಾಗಿದ್ದು, ಸ್ವಾತಂತ್ರ್ಯಾನಂತರ ಕೃಷಿ ಕ್ಷೇತ್ರದ ಬೆಳವಣಿಗೆಯೊಂದಿಗೆ ದೇಶದ ಆರ್ಥಿಕತೆಯನ್ನು ಕಟ್ಟಿಕೊಳ್ಳುತ್ತಾ ಹೋದಂತೆ, ಕೃಷಿಯ ಪ್ರಾಮುಖ್ಯತೆ ಹೆಚ್ಚಿ ಈ ಕ್ಷೇತ್ರವನ್ನು ದೇಶದ ಬೆನ್ನೆಲುಬು ಎಂಬುದಾಗಿ ಪ್ರತಿಬಿಂಬಿಸಲಾಯಿತು.

೧೯೫೦-೫೧ರಲ್ಲಿ ರಾಷ್ಟ್ರೀಯ ಆದಾಯಕ್ಕೆ ಶೇಕಡಾ ೫೫ರಷ್ಟು ಕೊಡುಗೆಯನ್ನು ನೀಡಿದ ಕೃಷಿ ವಲಯ ೭೦ ಶೇಕಡಾಕ್ಕಿಂತ ಹೆಚ್ಚು ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿದ್ದು, ಈ ಕಾರಣದಿಂದಲೇ ಕೃಷಿಯನ್ನು ಆರ್ಥಿಕ ಸಂರಚನೆಯಲ್ಲಿ ಪ್ರಾಥಮಿಕ ವಲಯವೆಂದು ಗುರುತಿಸಲಾಗಿದೆ.

ಕೈಗಾರಿಕಾ ಅಭಿವೃದ್ದಿಗೆ ಪೂರಕವಾಗಿ ಕೆಲಸ ಮಾಡಿದ ಭಾರತದ ಕೃಷಿ ವಲಯ ಕೈಗಾರಿಕಾ ಆದಾಯದಲ್ಲೂ ಶೇಕಡಾ ೫೦ರಷ್ಟು ಪಾಲು ಹೊಂದಿತ್ತು. ಕೃಷಿ ರಂಗ ದೇಶದ ಆರ್ಥಿಕ ಯೋಜನೆಗಳನ್ನು ರೂಪಿಸುವಲ್ಲಿ ಪ್ರಧಾನ ಪಾತ್ರ ವಹಿಸಿತ್ತು.

ಕಳೆದ ಆರು ದಶಕಗಳಿಗಿಂತ ಹೆಚ್ಚಿನ ಅವಧಿಯಲ್ಲೂ ಕೈಗಾರಿಕಾ ಹಾಗೂ ಸೇವಾ ವಲಯದ ಅಭಿವೃದ್ಧಿಗಾಗಿ ಸಾಕಷ್ಟು ಪ್ರಯತ್ನಗಳು ನಡೆಯುತ್ತಿದ್ದರೂ, ಕೃಷಿಯು ಇಂದಿಗೂ ಭಾರತದ ಬಹುಮುಖ್ಯ ಕಸುಬಾಗಿಯೇ ಉಳಿದುಕೊಂಡಿದೆ. ರಾಷ್ಟ್ರೀಯ ಆದಾಯದಲ್ಲಿ ಕೃಷಿರಂಗದ ಪಾಲು ಬಹುದೊಡ್ಡದು ಸ್ವಾತಂತ್ರ್ಯ ಪೂರ್ವದಲ್ಲಿ ಅದು ಮೂರನೇ ಎರಡರಷ್ಟಾಗಿದ್ದರೆ ೧೯೫೦-೫೧ ರಲ್ಲಿ ಈ ಕೊಡುಗೆ ಶೇಕಡಾ ೫೬-೫೭ ರಷ್ಟಾಗಿತ್ತು.

೧೯೯೧ರಲ್ಲಿ ಈ ಪ್ರಮಾಣ ಶೇಕಡಾ ೩೪ಕ್ಕೆ ಇಳಿದು ನಂತರದಲ್ಲಿ ಕೈಗಾರಿಕೆ ಮತ್ತು ಸೇವಾ ವಲಯದ ಉನ್ನತ ಮಟ್ಟದ ಅಭಿವೃದ್ದಿಯಿಂದಾಗಿ ರಾಷ್ಟ್ರೀಯ ಆದಾಯಕ್ಕೆ ಕೃಷಿ ಕ್ಷೇತ್ರದ ಕೊಡುಗೆ ಇಳಿಮುಖಗೊಂಡರು, ಈಗಲೂ ಶೆಕಡಾ ೧೭ಕ್ಕಿಂತವ ಹೆಚ್ಚಿನ ಕೊಡುಗೆಯನ್ನು ನೀಡುತ್ತಿರುವುದು. ದೇಶದ ಆರ್ಥಿಕತೆಯಲ್ಲಿ ಕೃಷಿಯ ಪಾತ್ರದ ಆಳವನ್ನು ಸೂಚಿಸುತ್ತದೆ. ಕೃಷಿಯನ್ನು ಆರ್ಥಿಕತೆಯ ಬದಲಾವಣೆಯ ಸೂಚ್ಯಂಕವಾಗಿ ನಾವು ಕಾಣಬಹುದಾಗಿದೆ.

ಕೃಷಿಯು ಭಾರತದಲ್ಲಿ ಇಂದಿಗೂ ಗರಿಷ್ಟಮಟ್ಟದ ಉದ್ಯೋಗವನ್ನು ಸೃಷ್ಟಿಸುತ್ತಿರುವ ಕ್ಷೇತ್ರ, ಈ ಕ್ಷೇತ್ರದಲ್ಲಿ ೧೯೮೦ರ ದಶಕದವರೆಗೂ ಶೇಕಡಾ ೭೦ಕ್ಕಿಂತ ಹೆಚ್ಚಿನ ಜನರು ತಮ್ಮ ಜೀವನ ನಿರ್ವಹಣೆಯನ್ನು ಕಂಡುಕೊಂಡಿದ್ದರು. ಬೇರೆ ಬೇರೆ ಯೊಜನೆಗಳಲ್ಲಿ ಪ್ರಜ್ಞಾಪೂರ್ವಕವಾಗಿ ಸಾಧಿಸಿದ ಇತರ ಆರ್ಥಿಕವಲಯಗಳ ಅಭಿವೃದ್ದಿಯಿಂದಾಗಿ ಈ ಪ್ರಮಾಣವನ್ನು ೬೦ ವರ್ಷಗಳ ನಂತರ ಶೆಕಡಾ ೫೮ಕ್ಕೆ ಕುಸಿಯಿತು.

ಮಾನವ ನಾಗರೀಕತೆಯ ಬೆಳವಣಿಗೆಯಲ್ಲಿ ಕೃಷಿಯು ಒಂದು ಪ್ರಮುಖ ಪಾತ್ರವನ್ನು ವಹಿಸಿದೆ. ಕೈಗಾರಿಕಾ ಕ್ರಾಂತಿ ಆಗುವವರೆಗೂ ಮಾನವ ಸಮುದಾಯದ ಬಹುದೊಡ್ಡ ಭಾಗವು ಕೃಷಿಯ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಂಡಿತ್ತು. ಕೃಷಿಯು ಕೌಶಲ್ಯಗಳ ಅಭಿವೃದ್ದಿಯ ಮೂಲಕ ಆರ್ಥಿಕತೆಯ ಬೆನ್ನೆಲುಬಾಗಿ ಕೌಶಲ್ಯಗಳ ಅಭಿವೃದ್ಧಿಯು ವ್ಯವಸಾಯಿಕ ಉತ್ಪಾದಕತೆಯನ್ನು ಹೆಚ್ಚಿಸಿದೆ. ಅಲ್ಲದೆ ಆರ್ಥಿಕ ಪ್ರಗತಿಗೆ ಕಾರಣವಾಗಿದೆ. ಕೃಷಿಯಲ್ಲಿ ಆರ್ಥಿಕ ಬದಲಾವಣೆಯಿಂದ ಜನರ ಆರ್ಥಿಕತೆ, ಜೀವನಮಟ್ಟ ಸುಧಾರಿಸಲು ಕಾರಣವಾಗಿವೆ.

೧೯೯೦ರ ದಶಕದಲ್ಲಿ ದೇಶ ಹೊಸ ಆರ್ಥಿಕ ನೀತಿಯನ್ನು ಅನುಸರಿಸಿ ಜಾಗತೀಕರಣದ ಪ್ರಕ್ರಿಯೆಯಲ್ಲಿ ಪಾಲ್ಗೊಂಡ ಆರಂಭದ ದಿನಗಳಲ್ಲಿ ಕೃಷಿರಂಗದ ಮೇಲಾಗುತ್ತಿರುವ ಪರಿಣಾಮದ ಅರಿವು ಕೃಷಿಕರ, ಕೃಷಿಕಾರ್ಮಿಕರ ಗಮನಕ್ಕೆ ಬರಲಿಲ್ಲ.

ಆದರೆ ಜಾಗತೀಕರಣದಿಂದ ಕೃಷಿ ಕ್ಷೇತ್ರದಲ್ಲೂ ನಿರೀಕ್ಷಿತ ಬದಲಾವಣೆಗಳಾಗಲಿಲ್ಲ ಹೊಸ ಆರ್ಥಿಕ ನೀತಿಯಿಂದ ದ್ವಿತೀಯ ಮತ್ತು ತೃತೀಯ ವಲಯಗಳು ದಾಖಲಿಸಿಕೊಂಡ ದೊಡ್ಡ ಮಟ್ಟದ ಬೆಳವಣಿಗೆಯಿಂದಾಗಿ ಕೃಷಿ ಕ್ಷೇತ್ರದ ಸ್ಥಾನಮಾನ ಪಲ್ಲಟಗೊಳ್ಳಲು ಆರಂಭವಾದದ್ದು, ಕೃಷಿ ಕ್ಷೇತ್ರವನ್ನು ಕಡೆಗಣಿಸುತ್ತಿರುವುದಕ್ಕೆ ಸಾಕ್ಷಿಯಾಗಿ ಕಾಣುವುದಕ್ಕಾರಂಭವಾಯಿತು.

ಕೃಷಿಯ ಮೇಲಿನ ಹೂಡಿಕೆ ಕಡಿಮೆಯಾಗಿ ಕೃಷಿ ಕ್ಷೇತ್ರವನ್ನು ಅವಲಂಭಿಸಿಕೊಂಡವರಿಗೆ ಆತಂಕವನ್ನು ತಂದೊಡ್ಡಿ ಕ್ರಮೇಣ ಜನರು ಪರ್ಯಾಯ ಮಾರ್ಗದತ್ತ ಆಲೋಚಿಸುವಂತಾಯಿತು.

ಮತ್ತೊಂದು ಕಡೆಯಲ್ಲಿ ಹೆಚ್ಚು ಆಕರ್ಷತವಾದ ನಗರದ ಬದುಕು ಈ ಜನರನ್ನು ಕೈ ಬಿಸಿ ಕರೆದಾಗ ದೊಡ್ಡಮಟ್ಟದಲ್ಲಿ ಕೃಷಿಕರ ಕೃಷಿಕಾರ್ಮಿಕರ ವಲಸೆ ಆರಂಭಗೊಂಡು ೧೯೫೫ರ ನಂತರದಲ್ಲಿ ಗಣನೀಯವಾಗಿ ಕೃಷಿ ಅವಲಂಭನೆ ಕುಸಿಯಲಾರಂಭಿಸಿತು.

ಸಣ್ಣ ರೈತರು ಹಣಕಾಸಿನ ಸಮಸ್ಯೆಯಿಂದ ಹೊರಬರುವುದಕ್ಕಾಗಿ ತಕ್ಷಣ ಉತ್ಪನ್ನಗಳನ್ನು ಮಾರಾಟ ಮಾಡಿದರೆ ದೊಡ್ಡ ರೈತರು ಸಂಗ್ರಹಣೆಯ ತೊಡಕುಗಳಿಂದಾಗಿ ಉತ್ಪನ್ನಗಳನ್ನು ಮಾರಾಟ ಮಾಡುವ ಸಂದಿಗ್ದತೆಯನ್ನು ಎದುರಿಸಬೇಕಾಯಿತು. ಹಾಗಾಗಿ ಕೃಷಿ ಆರ್ಥಿಕತೆ ಪೂರ್ಣ ಪ್ರಮಾಣದಲ್ಲಿ ಸಶಕ್ತಗೊಳ್ಳಬೇಕಿದ್ದರೆ ಉತ್ಪಾದನೆ ಮತ್ತು ಮಾರುಕಟ್ಟೆ ಎರಡಕ್ಕೂ ಉತ್ತೇಜನ ದೊರೆಯಬೇಕು. (ಸಿಂಗ ರಮೇಶ ೨೦೦೮)

## ೧.೨. ಸಾಹಿತ್ಯ ಸಮೀಕ್ಷೆ ಮತ್ತು ಸಮಸ್ಯೀಕರಣ:

ಅಧ್ಯಯನಕ್ಕೆ ಆರಿಸಿಕೊಂಡ ವಿಷಯದ ಮೇಲೆ ಸಾಕಷ್ಟು ಸಂಶೋಧನೆಗಳು ನಡೆದಿಲ್ಲವಾದರೂ ಭಾರತದ ಒಟ್ಟು ಬೆಳವಣಿಗೆಯಲ್ಲಿ ಕೃಷಿಯ ಪ್ರಾಮುಖ್ಯತೆಯನ್ನು ಸಾರುವ ಕುರಿತು ಆಳವಾದ ಚಿಂತನೆ ಅಧ್ಯಯನಗಳು ನಡೆದಿದ್ದನ್ನು ಕಾಣಬಹುದು. ೧೯೯೧ರ ನಂತರದಲ್ಲಿ ಕೃಷಿ ಕ್ಷೇತ್ರದ ಬೆಳವಣಿಗೆಯಲ್ಲಿ ಆಗುತ್ತಿರುವ ವ್ಯತ್ಯಯಗಳತ್ತ ಬೆಳಕು ಚೆಲ್ಲುವ ಪ್ರಯತ್ನ ನಡೆಯುತ್ತಲೇ ಇದೆ. ಕೃಷಿಕರಿಗೆ ಸಂಬಂಧಿಸಿದಂತೆ ದೊರೆತ ಸಾಹಿತ್ಯವನ್ನು ನಾವು ಈ ಕೆಳಗಿನಂತೆ ನೋಡಬಹುದಾಗಿದೆ.

ದೇಶದ ಆರ್ಥಿಕಾಭಿವೃದ್ಧಿಯಲ್ಲಿನ ಕೃಷಿಯ ಪಾತ್ರದ ಕುರಿತು ಸೈದ್ಧಾಂತಿಕ ಸಾಹಿತ್ಯವನ್ನು ನಾವು ಹದಿನೆಂಟನೇಯ ಶತಮಾನದ ಕೃಷಿ ಪಂಥದ ತಜ್ಞರುಗಳ ಬರಹದಲ್ಲಿಯೇ ಕಾಣಬಹುದು. ಅವರು ಕೃಷಿಯನ್ನು "ಪ್ರಗತಿಯ ಯಂತ್ರ ಎಂಬುದಾಗಿ ಪರಿಗಣಿಸಿದ್ದು" ಅರ್ಥವ್ಯವಸ್ಥೆಯ ಇತರ ವಲಯಗಳ ಪ್ರಗತಿಯ ಉತ್ತೇಜನ ಕೃಷಿ ಅಭಿವೃದ್ಧಿಯಿಂದ ಮಾತ್ರ ಸಾಧ್ಯವೆನ್ನುವುದು ಅವರೆಲ್ಲರ ಅಭಿಪ್ರಾಯವಾಗಿತ್ತು. ಭಾರತದ ಆರ್ಥಿಕತೆಯೂ ಇದಕ್ಕೆ ಹೊರತಾಗಿಲ್ಲ.

ಕೃಷಿಯು ಎಲ್ಲಾ ಸಂಪತ್ತಿನ ಮೂಲವೆಂಬುದು ವ್ಯವಸಾಯ ಪಂಥದ ಮೂಲಭೂತ ತತ್ವವಾಗಿದೆ. "ಪ್ರಾಂಕಾಯ್ದಿ ಕ್ರಸ್ವೇ" ಎಂಬ ಕೃಷಿ ಪಂಥದ ಚಿಂತಕರು ಕೃಷಿಯನ್ನು ಅತ್ಯಂತ ಮಹತ್ವದ ಕಸುಬು ಆದ್ದರಿಂದ ಕೃಷಿಯನ್ನು ಪರಿಪೂರ್ಣವಾದ ಹಂತಕ್ಕೆ ತರಬೇಕೆಂದು ವಾದಿಸಿದ್ದಾರೆ.

ಸಂಪ್ರದಾಯ ಪಂಥದ ಸಿದ್ಧಾಂತದಲ್ಲಿ ಕೃಷಿಗೆ ಮಹತ್ವದ ಸ್ಥಾನವು ದೊರೆತಿದೆ. ವ್ಯವಸಾಯೋತ್ಪಾಧನೆಯು ಹೇರಳವಾಗಿರುವಾಗ ಅರ್ಥ ವ್ಯವಸ್ಥೆಯು ಸುಭದ್ರವಾಗಿರುತ್ತದೆ ಮತ್ತು ಆಶಾವಾದವು ನೆಲೆಸಿರುತ್ತದೆ. ಭೂವುಯ ಲಭ್ಯತೆಯಲ್ಲಿ ಮಿತಿ ಮತ್ತು ಫಲವತ್ತಾದ ಭೂಮಿಯ ಕೊರತೆ ಮತ್ತು ಕೃಷಿ ಉತ್ಪಾದನೆಯ ಕುಸಿತ ಸಂಭವಿಸಿದಾಗ ಅಪಾಯವಿರುತ್ತದೆ ಎಂದು ಅವರು ಕಳವಳ ವ್ಯಕ್ತಪಡಿಸಿರುವರು. ಆರ್ಥಿಕ ಪ್ರಗತಿ ಯ ಸಾಧನೆಗೆ ಮತ್ತು ಬೆಳೆಯುತ್ತಿರುವ ಜನಸಂಖ್ಯೆಗೆ ಜೀವನಾಧರವನ್ನು ಕಲ್ಪಿಸಲು ವ್ಯವಸಾಯ ವಲಯವು ಅತ್ಯವಶ್ಯಕವಾದುದು ಎಂಬ ವಿಚಾರವು ಸಂಪ್ರದಾಯ ಪಂಥದ ಆರ್ಥಿಕ ಚಿಂತನೆಯಲ್ಲಿ ಹೊರಹೊಮ್ಮಿದೆ.

ಪಂಡಿತ ನೆಹರು ಕೃಷಿಯ ಮಹತ್ವದ ಕುರಿತು ತಮ್ಮ ಒಂದು ಲೇಖನದಲ್ಲಿ ಪ್ರಸ್ತಾಪಿಸುತ್ತಾ ಕೃಷಿ ಬೆಳವಣಿಗೆಯ ತುರ್ತು ಅನಿವಾರ್ಯತೆಯನ್ನು ವಿವರಿಸುತ್ತಾರೆ. "ಎವರಿತಿಂಗ್ ಎಲ್ಸ್ ಕ್ಯಾನ್ ವೈಟ್ ಬಟ್ ನಾಟ್ ಆಗ್ರಿಕಲ್ಚರ್" ಎಂಬುದಾಗಿ ೧೧ನೇ ಪಂಚವಾರ್ಷಿಕ ಯೋಜನೆಯ ಕರಡು ಪ್ರತಿಯಲ್ಲಿ ನೆಹರೂರವರ ಭಾವನೆ ಮತ್ತೊಮ್ಮೆ ಪುನರುಚ್ಚಾರಗೊಂಡಿದ್ದನ್ನು ನೋಡಬಹುದು. "ಆಗ್ರಿಕಲ್ಚರ್ ಡೆವಲಪ್‌ಮೆಂಟ್ ಇಸ್ ಸೆಂಟ್ರಲ್ ಟು ಇಕಾನಾಮಿಕ್ ಡೆವಲಪ್‌ಮೆಂಟ್ ಆಪ್ ದ ಕಂಟ್ರಿ" (೧೧ನೇ ಪಂಚವಾರ್ಷಿಕ ಯೋಜನೆ)

*ಎಮ್.ಜೆ.ಪ್ರಭು ಆಗ್ರಿಕಲ್ಚರ್ ಕರಸ್ಪಾಂಡೆಂಟ್ ದ ಹಿಂದು*"ತಮ್ಮ ಬದುಕು ಲೇಖನ"*ಇಂಪೋರ್ಟಿಂಗ್ ಪುಡ್ ಗ್ರೈನ್ಸ್ ವಿಲ್ ನಾಟ್ ಸಾಲ್ವ್ ಪ್ರಾಬ್ಲಮ್ಸ್* ದಲ್ಲಿ ಸರಕಾರ ಎಷ್ಟು ಮಾತ್ರಕ್ಕೂ ಕೃಷಿಯನ್ನು ಕಡೆಗಣಿಸುವಂತಿಲ್ಲ ಮತ್ತು

ಕಡೆಗಣಿಸಿದ್ದೇ ಆದರೆ ಅದು ಭಾರತ ದೇಶದ ಆರ್ಥಿಕತೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಬಹುದು ಎಂಬುದಾಗಿ ತಿಳಿಸಿದ್ದರು. ಹಾಗೇಯೇ ಕೃಷಿ ಉತ್ಪಾದನೆ ಕಡಿಮೆಯಾದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಯ ಆಹಾರ ಬೇಡಿಕೆಯನ್ನು ಸರಿಪಡಿಸಲಾಗದು ಎನ್ನುವುದು ಅವರ ವಾದ.

ಡಾ. ಬಿ.ಕೆ. ಮೂರ್ತಿ ತಮ್ಮ ಒಂದು ಕುರುಕ್ಷೇತ್ರ ಜುಲೈ೨೦೧೦ರಲ್ಲಿ ಪ್ರಕಟಿಸಿದ ಒಂದು ಲೇಖನದಲ್ಲಿ ಭಾರತದಕೃಷಿ ಕ್ಷೇತ್ರದಲ್ಲಿ ಹೆಚ್ಚಿನ ಬೆಳೆಗಳ ಉತ್ಪಾದನೆ ಸ್ಥಗಿತಗೊಂಡಿದ್ದನ್ನು ಪ್ರಸ್ತಾಪಿಸುತ್ತಾ ೧೯೯೬-೯೭ ರಿಂದ ೨೦೦೪-೨೦೦೫ರ ನಂತರದಲ್ಲಿ ದೇಶ ತೀವ್ರ ಆಹಾರ ಸಮಸ್ಯೆಯನ್ನು ಎದುರಿಸುತ್ತಿದ್ದು, ಇದನ್ನು ಸಕಾಲದಲ್ಲಿ ಸರಿಪಡಿಸಿಕೊಳ್ಳದಿದ್ದರೆ ಮುಂದಿನ ದಿನಗಳಲ್ಲಿ ಅನಾಹುತವಾಗಬಹುದು ಎನ್ನುವ ಎಚ್ಚರಿಕೆ ನೀಡಿದ್ದಾರೆ.ಇದೇ ಲೇಖನವನ್ನು ಮುಂದುವರೆಸುತ್ತಾ ಡಾ. ಬಿ.ಕೆ. ಮೂರ್ತಿ ದೇಶದ ಭತ್ತದ ಉತ್ಪಾದನಾ ಸಾಮರ್ಥ್ಯ ಚೀನಾಕ್ಕಿಂತ ೫೦% ಕಡಿಮೆಯಿದೆ ಎಂಬುವುದನ್ನು ಸ್ಪಷ್ಟಪಡಿಸಿದ್ದಾರೆ ಹೆಚ್ಚುತ್ತಿರುವ ಆಹಾರ ಬೇಡಿಕೆಯನ್ನು ಪೂರೈಸುವ ನಿಟ್ಟಿನಲ್ಲಿ ಕೃಷಿಯ ಮೂಲಭೂತ ಸೌಕರ್ಯಗಳು ಹೆಚ್ಚಾಗಬೇಕು ಎನ್ನುವುದು ಇವರ ಅಭಿಮತ.

ಭಾರತೀಯ ರಿಸರ್ವ ಬ್ಯಾಂಕ್ ಪ್ರಕಟಿಸಿದ "ಭಾರತದಲ್ಲಿ ೧೯೯೧ರ ನಂತರ ಕೃಷಿ ಅಭಿವೃದ್ಧಿ" ಎನ್ನುವ ಅಧ್ಯಯನದಲ್ಲಿ ಕೃಷಿ ಚಟುವಟಿಕೆಗಳು ಕುಗ್ಗುತ್ತಿರುವ ಸೂಚನೆಯನ್ನು ನೀಡಲಾಗಿದೆ. ಪ್ರೋ.ಪಿ.ಬಾಲಕೃಷ್ಣನ್, ಶ್ರೀ ರಮೇಶ್ ಗೋಲೆಟ್ ಮತ್ತು ಪಂಕಜ್ ಕುಮಾರ್ ಒಟ್ಟಾಗಿ ನಡೆಸಿದ ಈ ಅಧ್ಯಯನದಲ್ಲಿ ೧೯೯೧ರ ನಂತರದ ನಿಧಾನಗತಿಯ ಕೃಷಿ ಬೆಳವಣಿಗೆಯ ಕಾರಣಗಳನ್ನು ವಿವರಿಸಿದ್ದಾರೆ. ಚಿಕ್ಕ ಹಿಡುವಳಿ ಸಾರ್ವಜನಿಕ ಹೂಡಿಕೆ ಆದದ್ದು ಸಂಶೋಧನೆಗೆ ಪ್ರಾಶಸ್ತ್ಯ ದೊರಕದೇ ಇದ್ದದ್ದು ಇತ್ಯಾದಿ ಈ ಕಾರಣಗಳು.

ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಭಾರತದ ರಾಷ್ಟ್ರಪತಿಯಾಗಿದ್ದ ಸಂದರ್ಭದಲ್ಲಿ ಬಡತನ ನಿರ್ಮೂಲನದ ಕುರಿತಾದ ಒಂದು ಯೋಜನೆಯನ್ನು ಜಾರಿಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು ಕಲಾಂ ಅವರ ಅಭಿಪ್ರಾಯವು ಗಾಂಧೀಜಿಯವರು ಪ್ರಸ್ತಾಪಿಸುತ್ತಿದ್ದ ಹಳ್ಳಿ ಮತ್ತು ನಗರಗಳ ಸಂಬಂಧಕ್ಕೆ ಸಮನಾದದ್ದು ಹಳ್ಳಿಗಳಲ್ಲಿ ನಗರಗಳ ಸೌಲಭ್ಯವನ್ನು ಪೂರೈಸುವುದರ ಮೂಲಕ ಗ್ರಾಮೀಣ ಬಡತನವನ್ನು ಹೋಗಲಾಡಿಸುವುದರ ಜೊತೆಗೆ ದೊಡ್ಡ ಮಟ್ಟದ ರೈತರ ಕೃಷಿ ಕಾರ್ಮಿಕರ ವಲಸೆಯನ್ನು ತಡೆಗಟ್ಟಬಹುದು.

ಹನೋಕ ಬಿ.ಎನ್.ರವರು ಬರೆದ "ಕೃಷಿ ಕ್ಷೇತ್ರದಲ್ಲಿ ಜಾಗತೀಕರಣದ ಪ್ರಭಾವ ದಾವಣಗೆರೆ ಜಿಲ್ಲೆಗೆ ಸೀಮಿತಗೊಳಿಸಿ ಒಂದು ವಿಮರ್ಶಾತ್ಮಕ ಅಧ್ಯಯನ" (೨೦೦೦) ಎಂಬ ಗ್ರಂಥದ ಅಧ್ಯಾಯದಲ್ಲಿ ಭಾರತದ ಕೃಷಿ ಮತ್ತು ಕೃಷಿ ಪರಂಪರೆ ಮತ್ತು ಕೃಷಿ ಪದ್ಧತಿ ಜಾಗತೀಕರಣದಿಂದ ಕೃಷಿ ಕುಂಠಿತವಾಗುತ್ತಿರುವುದನ್ನು ಕಾಣಬಹುದು.

ಪ್ರೀತಮ್ ಶೆಟ್ಟಿ ಕೆ. ರವರು ಬರೆದ "ಕೃಷಿ ಮೇಲೆ ಕೈಗಾರಿಕರಣದ ಪ್ರಭಾವ ಮಂಗಳೂರು ತಾಲೂಕಿನಲ್ಲಿ ಪ್ರಕರಣ" (೨೦೦೩) ಎಂಬ ಅನುಬಂಧದಲ್ಲಿ ಮಂಗಳೂರಿನ ತಾಲೂಕಿನಲ್ಲಿ ಕೈಗಾರೀಕರಣದಿಂದ ಕೃಷಿ ಚಟುವಟಿಕೆಗಳು ಇಳಿಮುಖವಾಗುತ್ತಿದೆ ಎಂಬ ಅಂಶವನ್ನು ತಮ್ಮ ಅನುಬಂಧದಲ್ಲಿ ಕಳವಳ ವ್ಯಕ್ತಪಡಿಸಿದ್ದಾರೆ.

ಶ್ರೀಮತಿ ಸುಶೀಲ ರವರು ಬರೆದ "ಕುಗ್ಗುತ್ತಿರುವ ಕೃಷಿ ಚಟುವಟಿಕೆಗಳಿಂದಾಗಿ ಜನ ಜೀವನ ಮೇಲಾಗುತ್ತಿರುವ ಆರ್ಥಿಕ ಸಾಮಾಜಿಕ ಪರಿಣಾಮಗಳು ಒಂದು ಅಧ್ಯಯನ ಬ್ರಹ್ಮಾವರದ ಎಂಟು ಗ್ರಾಮಗಳು" (೨೦೧೦) ಎಂಬ ಗ್ರಂಥದ ಅಧ್ಯಯನದಲ್ಲಿ ಬ್ರಹ್ಮಾವರದ ಎಂಟು ಗ್ರಾಮಗಳ ಸಾಮಾಜಿಕ ಜಾಗತೀಕರಣ ಮತ್ತು ಆಧುನೀಕರಣದಿಂದ ಕೃಷಿ ಚಟುವಟಿಕೆಗಳು ಕುಗ್ಗುತ್ತಿರುವುದನ್ನು ತೋರಿಸುತ್ತದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೃಷಿಯ ಮಹತ್ವವನ್ನು ಅತೀ ಮುಖ್ಯ ಎಂದಿದ್ದಾರೆ.

ಉಡುಪಿ ಜಿಲ್ಲೆಯ ಕುರಿತಾಗಿ ಶ್ರೀನಿವಾಸ ಭಟ್ ಅವರು ಉದಯವಾಣಿ ದಿನಪತ್ರಿಕೆಯಲ್ಲಿ (೧೯-೦೨-೨೦೧೨) ಕರಷಿರಂಗದಲ್ಲಿ ಗೌರವಪೂರ್ಣ ಬದುಕು ಎನ್ನುವ ಲೇಖನದಲ್ಲಿ ಗ್ರಾಮೀಣ ಕೃಷಿ ಕ್ಷೇತ್ರದ ಸಮಸ್ಯೆಗಳ ಕುರಿತು ಕೆಲವು ಪ್ರೌಢ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ಅವರು ಹೇಳಿದಂತೆ ಕೃಷಿಯನ್ನು ಸಣ್ಣ ಪ್ರಮಾಣದಲ್ಲಿ ಮಾಡಿದಾಗ ಖರ್ಚು ಹೆಚ್ಚು ಲಾಭ ಕಡಿಮೆಯಾಗುತ್ತದೆ. ಹೊಸ ಹೊಸ ಪ್ರಯೋಗಗಳನ್ನು ಅಳವಡಿಸುವುದಕ್ಕೆ ಹಿಡುವಳಿಯ ಗಾತ್ರ ಹೆಚ್ಚಿದ್ದರೆ ಒಳ್ಳೆಯದುಇದರ ಜೊತೆಯಲ್ಲಿ ಕೃಷಿಕನಾದವನಿಗೆ ತಾನು ಕೈಗೊಳ್ಳುವ ಕಾರ್ಯಗಳಲ್ಲಿ ತೀವ್ರವಾದ ತುಡಿತವಿರಬೇಕು, ಕೃಷಿಯನ್ನು ಕೃಷಿಕರು ಪ್ರೀತಿಸುವಂತಾಗಬೇಕು. ಇಂದಿನ ಯುವ ಸಮುದಾಯ ಕೃಷಿಯಿಂದ ದುರ ಸರಿಯುವುದಕ್ಕೆ ಆ ಕುರಿತ ಆಸಕ್ತಿಯ ಕೊರತೆಯೇ ಕಾರಣ ಎನ್ನುವುದು ಲೇಖಕರ ಸ್ಪಷ್ಟ ಅಭಿಪ್ರಾಯ.

ಆದರೆ ಈ ಎಲ್ಲಾ ಅಧ್ಯಯನಗಳು ಕೃಷಿ ಅವಲಂಭನೆ ಕುಗ್ಗುತ್ತಿರುವ ವಿಚಾರವನ್ನು ಪ್ರಸ್ತಾಪಿಸಿ ಈ ರೀತಿಯ ಕೃಷಿ ಅವಗಣನೆ ಸರಿಯಲ್ಲ ಎನ್ನುವ ಎಚ್ಚರಿಕೆಯನ್ನು ನೀಡುವಷ್ಟರ ಮಟ್ಟಿಗೆ ಕೆಲಸವನ್ನು ಮಾಡಿದೆ. ಕೈಗಾರಿಕೆ ಮತ್ತು ಸೇವಾವಲಯದ ಬೆಳವಣಿಗೆಯಾದಂತೆ ಕೃಷಿವಲಯದ ಬೆಳವಣಿಗೆಯಲ್ಲಿ ಕಾಣಿಸಿಕೊಂಡ ಹಠಾತ್ ಕುಸಿತದ ಕಾರಣ ಮತ್ತು ಮುಂದಿನ ಪರಿಣಾಮಗಳ ಕುರಿತು ಸರಕಾರದ ಗಮನ ಸೆಳೆಯುವ ಪ್ರಯತ್ನ ಮಾಡಲಿಲ್ಲ ಏರುತ್ತಿರುವ ಆಹಾರ ಬೇಡಿಕೆಯನ್ನು ಪೂರೈಸುವ ನಿಟ್ಟಿನಲ್ಲಿ ವೈಜ್ಞಾನಿಕ ಕೃಷಿ ಪದ್ಧತಿ ಸಹಕರಿಸಿತೇ ಹೊರತು ಅದರ ಫಲ ಗ್ರಾಮೀಣ ಕೃಷಿಕರಿಗೆ ದೊರೆಯಲಿಲ್ಲ. ದೇಶದ ಪ್ರಗತಿಯ ಬೆನ್ನು ಹತ್ತಿ ಜಾಗತೀಕರಣ ಉದಾರೀಕರಣದತ್ತ ಗಮನ ಹರಿಸಿದ್ದರಿಂದಲೇ ಕೃಷಿ ಕ್ಷೇತ್ರ ನಿರ್ಲಕ್ಷಿಸಲ್ಪಟ್ಟದ್ದು ವೈಜ್ಞಾನಿಕ ಕೃಷಿ ಪದ್ದತಿಯಿಂದ ಕೃಷಿ ಚಟುವಟಿಕೆಗಳು ವೈವಿಧ್ಯಮಯಗೊಂಡು ವಾಣಿಜ್ಯ ಬೆಳೆಗಳಿಗೆ ಪ್ರಾಮುಖ್ಯತೆ ಹೆಚ್ಚಿ ಆಹಾರೋತ್ಪಾಧನೆಯ ಪ್ರಮಾಣ ತಗ್ಗಿದ್ದು ಗ್ರಾಮೀಣ ಬದುಕಿನಲ್ಲಾದ ಏರುಪೇರುಗಳಿಗೆ ಕಾರಣವಾಯಿತು.

ಈ ರೀತಿಯಾಗಿ ಹಲವಾರು ಸಂಶೋಧಕರು ಕೃಷಿಯ ಸ್ಥಿತಿಗತಿಗಳ ಬಗ್ಗೆ ಹಾಗೂ ಸಮಸ್ಯೆಗಳ ಕುರಿತು ಹಾಗೂ ಅವರಿಗೆ ಇರುವ ಸೌಲಭ್ಯಗಳ ಕುರಿತು ಅಧ್ಯಯನ ಮಾಡುವುದನ್ನು ನಾವು ಸಾಹಿತ್ಯದ ಪರಾಮರ್ಶೆಯಲ್ಲಿ ನೋಡಬಹುದಾಗಿದೆ. ಪ್ರತಿಯೊಬ್ಬರ ವಿಚಾರಗಳನ್ನು ಕುಲಂಕುಷವಾಗಿ ನೋಡಲಾಗಿ ಕೃಷಿಕರು ನಿರಂತರವಾಗಿ ಒಂದಿಲ್ಲೊಂದು ಸಮಸ್ಯೆಗಳಿಗೆ ಗುರಿಯಾಗಿಟ್ಟುಕೊಂಡು ಬದುಕುತ್ತಿರುವುದು ಕಂಡುಬರುತ್ತದೆ. ಇದರಿಂದ ರೈತರ ಜೀವನ ನಿರ್ವಹಣೆ ಮಾಡಲು ಮತ್ತು ಮಕ್ಕಳ ಭವಿಷ್ಯ ನಿರ್ಮಿಸಲು ತೊಂದರೆಯಾಗುತ್ತಿದ್ದು ಇದರಿಂದ ಕೆಲವೊಮ್ಮೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಹಲವಾರು ಯೋಜನೆಗಳನ್ನು ಹಾಗೂ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ.

ಇದು ಸ್ವಾಗತಾರ್ಹ ಬೆಳವಣಿಗೆಯಾದರೂ ಸಹ ಅವುಗಳು ಗ್ರಾಮೀಣ ಭಾಗದ ರೈತರಿಗೆ ಸಂಪರ್ಕವಾಗಿ ತಲುಪದಿರುವುದು ನಿರಾಶಾಧಾಯಕ ಸಂಗತಿಯಾಗಿದೆ.

ಜೊತೆಗೆ, ಆಹಾರೋತ್ಪಾಧನೆಯಿಂದ ವಾಣಿಜ್ಯ ಬೆಳೆಗಳಿಗೆ ಪಲ್ಲಟಗೊಂಡಾಗ ಬದುಕಿನ ಭಾಗವಾಗಿದ್ದ ಕೃಷಿ ಚಟುವಟಿಕೆಗಳ ಲಾಭ ನಷ್ಟದ ಲೆಕ್ಕಚಾರ ಶುರುವಾಗಿ ಕೃಷಿ ಲಾಭದಾಯಕವಲ್ಲ ಎನ್ನುವ ಅಭಿಪ್ರಾಯಕ್ಕೆ ಬರುವಂತಾಯಿತು. ಈ ಆರ್ಥಿಕ ಬೆಳವಣಿಗೆಯಿಂದ ದೊಡ್ಡ ಪ್ರಮಾಣದಲ್ಲಿ ಕೃಷಿ ಕಾರ್ಮಿಕರು ವಲಸೆಗೊಳ್ಳಲಾರಂಬಿಸಿ ಹಳ್ಳಿಗಳಲ್ಲಿ ಕಾರ್ಮಿಕರ ತೀವ್ರ ಕೊರತೆಯಿಂದಾಗಿ ಗ್ರಾಮೀಣ ಕೃಷಿಕರು ಕಂಗಾಲಾಗಲಾರಂಭಿಸಿದರು. ದೇಶದ ಆರ್ಥಿಕತೆಯ ಬೆನ್ನೆಲುಬಾದ ಕೃಷಿ ಬದುಕು ಯಾರಿಗೂ ಬೇಡವಾಯಿತು. ಮತ್ತು ಆರ್ಥಿಕತೆಯಲ್ಲಿ ತುಂಬಾ ಬದಲಾವಣೆಗಳಯಿತು. ಕೃಷಿ ಆರ್ಥಿಕತೆ ತುಂಬಾ ನಷ್ಟದ ವಲಯ ಎಂಬುದು ಜನರ ಅಭಿಪ್ರಾಯವಾಗಿದೆ. ಈ ಪರಿಸ್ಥಿತಿ ಬದಲಾಗಬೇಕಾಗಿರುವುದು ಎಷ್ಟು ಅನೀವಾರ್ಯವೋ ಈ ನಿಟ್ಟಿನಲ್ಲಿ ಸಂಸೋಧನೆ ನಡೆಯಬೇಕಾಗಿರುವುದು ಅಷ್ಟೆ ಅಗತ್ಯ. ಇದೊಂದು ಈ ದಿಶೆಯಲ್ಲಿ ಕಿರು ಪ್ರಯತ್ನ.

## ೧.೩. ಅಧ್ಯಯನದ ಅಗತ್ಯ

ವಿಶ್ವದಾದ್ಯಂತ ಲಕ್ಷಾಂತರ ರೈತರು ದುರ್ಗಮವಾಗಿರುವ ಹಳ್ಳಿಗಳಲ್ಲಿ ಮತ್ತು ನಗರಗಳಲ್ಲಿ ವಾಸಿಸುತ್ತಿದ್ದಾರೆ. ಇಲ್ಲಿ ದುರ್ಗಮ ಪರಿಸ್ಥಿತಿ ಎಂಬುದನ್ನು ಎರಡು ರೀತಿಯಿಂದ ನೋಡಬಹುದು. ಮೋದಲನೇಯದು ನೈಸರ್ಗಿಕವಾಗಿ ಬೆಟ್ಟ-ಗುಡ್ಡ-ಕಾಡುಗಳಿಂದ ಕೂಡಿ ರಸ್ತೆ ಸಂಪರ್ಕ ಇಲ್ಲದೇ ದೂರ ಇರುವಂತಹದ್ದು ಎರಡನೇಯದೆಂದರೆ ಮಾನವೀಯ ಮನಸಿನ ಸಂಪರ್ಕ ಇಲ್ಲದೇ ದೂರವಾಗಿ ಉಳಿದಿರುವಂತಹದ್ದು ಇಂತಹ ದುರ್ಗಮವಾದ ಸ್ಥಳಗಳಲ್ಲಿ ಹಾಗೂ ಪರಿಸ್ಥಿತಿಗಳಲ್ಲಿ ವಿಶೇಷವಾಗಿ ಗ್ರಾಮೀಣ ರೈತರು ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ.

ಭಾರತದ ಕೃಷಿರಂಗ ಬೆಳೆದು ಬಂದ ದಾರಿ ವಿಭಿನ್ನವಾದುದು. ಅರ್ಥವ್ಯವಸ್ಥೆಯು ಕೃಷಿ ಬೆಳವಣಿಗೆ ಹೊಂದಿದಂತೆ ಕೃಷಿಯ ಪ್ರಾಮುಖ್ಯತೆ ಹೆಚ್ಚಿ ದೇಶದ ಆರ್ಥಿಕತೆಯಲ್ಲಿ ಮಹತ್ತರ ಪಾತ್ರ ವಹಿಸುತ್ತಿದ್ದಂತೆಯೇ ಕೃಷಿ ಕ್ಷೇತ್ರವೂ ಉನ್ನತ ಮಟ್ಟದ ಪ್ರಗತಿಯನ್ನು ಕಾಣುವಂತಾದದ್ದು.ದೇಶವು ಕೃಷಿಗಾಗಿ ಕೈಗೊಂಡ ಯೋಜನೆಗಳ ಫಲ ಗ್ರಾಮೀಣ ಬದುಕು ಕೃಷಿ ಬಡತನ ಸುಧಾರಣೆ ಇತ್ಯಾದಿಗಳು ದೈನಂದಿನ ಚಿಂತನೆಗಳ ವಿಷಯವಾಗಿದ್ದು ಅವುಗಳ ಅಭಿವೃಧ್ಧಿಯ ಕನಸಿನೊಡನೆ ಬದುಕುತ್ತಿದ್ದ ಹಳ್ಳಿಯ ಜನ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಬೆಳೆಯುತ್ತಿದ್ದಂತೆ ನಿರ್ಣಾಯಕ ಮಟ್ಟದಲ್ಲಿ ಆರ್ಥಿಕ ಪ್ರಗತಿಯನ್ನು ದಾಖಲಿಸಿಕೊಂಡಿದ್ದರು. ಆದರೆ ಇದ್ದಕ್ಕಿದ್ದಂತೆ ದೇಶದ ಆರ್ಥಿಕ ನೀತಿಯಲ್ಲಿ ತಂದ ಬದಲಾವಣೆ ಜಾಗತೀಕರಣದಂತಹ ಆಧುನೀಕರಣ ಮೀರುವಂತಹ ಅಸ್ತ್ರದಿಂದಾಗಿ ನಮಗೆ ಅರಿವಿಗೆ ಬಾರದ ರೀತಿಯಲ್ಲಿ ಗ್ರಾಮೀಣ ಬದುಕು ತತ್ತರಿಸುವಂತಾದದ್ದು ಈ ಕ್ಷೇತ್ರದಲ್ಲಿ ನಡೆಯಬೇಕಾದ ಸಂಶೋಧನೆಯ ಅನಿವಾರ್ಯತೆಯನ್ನು ಸಾರುತ್ತದೆ.

ಇದು ಗ್ರಾಮೀಣ ರೈತರು ಸಾಮಾಜಿಕವಾಗಿ ಆರ್ಥಿಕವಾಗಿ ಹಾಗೂ ಸರಿಯಾದ ಶೈಕ್ಷಣಿಕ ಜ್ಞಾನ ಇಲ್ಲದೇ ಇವರು ಮಾನಸಿಕವಾಗಿ ಜೈವಿಕವಾಗಿ ದೈಹಿಕವಾಗಿ ಹಲವಾರು ತರಹದ ಗಂಬೀರವಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ನಮ್ಮ ದೇಶದಲ್ಲಿ ಕೇಂದ್ರ ಸರಕಾರ ರಾಜ್ಯ ಸರಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಹಲವಾರು ಸೌಲಭ್ಯ ಕಾರ್ಯಕ್ರಮಗಲನ್ನು ಜಾರಿಗೆ ತಂದರು ಸಹ ಇಂದು ಗ್ರಾಮೀಣ ಭಾಗದ ರೈತರು ಅವುಗಳ ಬಗ್ಗೆ ಸರಿಯಾದ ಜ್ಞಾನವಿಲ್ಲದೆ ಇಂತಹ ಸೌಲಭ್ಯಗಳು ರೈತರಿಗೆ ಸರಿಯಾಗಿ ತಲುಪದೆ ಇರುವುದು ವಿಷಾದಕರ ಸಂಗತಿಯಾಗಿದೆ.

೧೯೯೧ರ ಜಾಗತೀಕರಣದ ನೀತಿಯಿಂದ ಕೃಷಿ ರಂಗದ ಮೇಲೆ ಹಲವಾರು ಪರಿಣಾಮಗಳಾಗುತ್ತಿದ್ದರೂ ಅವುಗಳನ್ನು ಗುರುತಿಸಿದ್ದೇವೆ ವಿನಹ ಈ ನಿಟ್ಟಿನಲ್ಲಿ ಸಂಶೋದನೆಗಳಾಗಲಿಲ್ಲ ಹಾಗಾಗಿ ಕುಸಿಯುತ್ತಿರುವ ಕೃಷಿ ಚಟುವಟಿಕೆಗಳು ಅವಲಂಬನೆ ಹಾಗೂ ಅದರಿಂದಾಗಿ ಗ್ರಾಮೀಣ ಬದುಕಿನಲ್ಲಾದ ಪಲ್ಲಟ ಮತ್ತು ಆರ್ಥಿಕ ಪಲ್ಲಟವನ್ನು ವಿಶ್ಲೇಶಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

## ೧.೪. ಅಧ್ಯಯನದ ಉದ್ದೇಶಗಳು

- ಕುಂದಾಪುರ ತಾಲೂಕಿನ ಕೃಷಿಯಲ್ಲಿ ಬದಲಾಗುತ್ತಿರುವ ಅಂಶಗಳನ್ನು ಅಧ್ಯಯನ ಮಾಡುವುದು.
- ಕುಂದಾಪುರ ತಾಲೂಕಿನಲ್ಲಿ ಕೃಷಿ ಅವಲಂಬನೆ ಕಡಿಮೆಯಾಗುತ್ತಿರುವುದನ್ನು ಅಧ್ಯಯನ ಮಾಡುವುದು.
- ಅಧ್ಯಯನ ಪ್ರದೇಶದಲ್ಲಿ ಕೃಷಿಯಿಂದ ದೂರ ಸರಿಯುತ್ತಿರುವ ಜನತೆ ಎದುರಿಸುತ್ತಿರುವ ಸಮಸ್ಯೆಗಳು.
- ಕುಂದಾಪುರ ತಾಲೂಕಿನ ಪ್ರದೇಶದಲ್ಲಿ ಕೃಷಿ ಕುಂಠಿತಗೊಳ್ಳಲು ಕಾರಣವಾಗಿರುವ ಅಂಶವನ್ನು ವಿಶ್ಲೇಷಿಸುವುದು.

## ಪ್ರಾಕ್ ಕಲ್ಪನೆಗಳು (ಊಹೆಗಳು):

೧. ಒಂದು ಪ್ರದೇಶದ ಕೃಷಿಯೇತರ ಮೂಲಗಳಿಂದ ಅಭಿವೃದ್ಧಿ ಹೊಂದಿದಂತೆ ಕೃಷಿ ಆರ್ಥಿಕತೆಯ ಮೇಲಿನ ಅವಲಂಬನೆ ಕಡಿಮೆಯಾಗುತ್ತದೆ.

೨. ಭೂಮಿಯ ಪ್ರಮಾಣ ಮಿತವಾಗಿ ಸ್ಥಿರವಾಗಿ ಇರುವುದರಿಂದ ಮತ್ತು ಬೆಳೆಯುತ್ತಿರುವ ಜನಸಂಖ್ಯೆಗೆ ಕೊರತೆಯಿಲ್ಲದಂತೆ ಆಹಾರ ಪದಾರ್ಥಗಳನ್ನು ಪೂರೈಕೆ ಮಾಡಬೇಕಾಗಿರುವ ಕಾರಣದಿಂದ ಕೃಷಿ ವಲಯದಲ್ಲಿ ತಾಂತ್ರಿಕ ಮುನ್ನಡೆಯು ಪ್ರಾಶಸ್ತ್ಯವನ್ನು ಪಡೆದುಕೊಳ್ಳುತ್ತದೆ.

೩. ಕೃಷಿಯು ವಾಣಿಜ್ಯಕರಣಗೊಳ್ಳುತ್ತಿದೆ ಎಂದರೆ ಲಾಭ ಕಡಿಮೆಯಾದಾಗ ಕೃಷಿಯ ಕುರಿತಾದ ಆಸಕ್ತಿ ಕಡಿಮೆಯಾಗುತ್ತದೆ.

೪. ಪರಿವರ್ತನೆಗೊಳ್ಳುತ್ತಿರುವ ಆರ್ಥಿಕತೆಯಲ್ಲಿ ಕೃಷಿ ವ್ಯವಸ್ಥೆಯಲ್ಲಿ ಆಹಾರ ಬೆಳೆಗಳಿಗೆ ಬದಲಾಗಿ ವಾಣಿಜ್ಯ ಬೆಳೆಗಳನ್ನು ಅಧಿಕ ಪ್ರಮಾಣದಲ್ಲಿ ಬೆಳೆಯಲಾಗುತ್ತದೆ.

## ೧.೫. ಅಧ್ಯಯನದ ವ್ಯಾಪ್ತಿ:

ಭಾರತ ಹಳ್ಳಿಗಳ ದೇಶ ದೇಶದ ಆರ್ಥಿಕಾಭಿವೃದ್ದಿಯಲ್ಲಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಯ ಮಹತ್ವವನ್ನು ಹಿನ್ನೆಲೆಯಾಗಿರಿಸಿ ಬದಲಾಗುತ್ತಿರುವ ಕೃಷಿ ಆರ್ಥಿಕತೆಯ ಮಹತ್ವ ಕೃಷಿ ಅವಲಂಬನೆ ಮತ್ತು ಮರೆಯಾಗುತ್ತಿರುವ ಗ್ರಾಮೀಣ ಬದುಕಿನ ಚಿತ್ರಣ ಪ್ರಸ್ತುತ ಪಡಿಸುವುದು ಈ ಸಂಶೋಧನೆಯ ಪ್ರಧಾನ ಆಶಯ. ಉದ್ದೇಶ ಪೂರ್ವಕವಾಗಿ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕನ್ನು ಅಧ್ಯಯನದ ವ್ಯಾಪ್ತಿಯಾಗಿ ಆಯ್ಕೆ ಮಾಡಲಾಗಿದೆ. ಕುಂದಾಪುರ ತಾಲೂಕಿನ ಹೆಚ್ಚಿನ ಗ್ರಾಮಗಳು ಕೃಷಿಯನ್ನೆ ಅವಲಂಬಿಸಿಕೊಂಡಿದ್ದು ಮಾತ್ರವಲ್ಲದೇ ಗ್ರಾಮೀಣ ಬದುಕಿನ ಪರಿಕಲ್ಪನೆಗೆ ಜೀವಂತ ಪಾತ್ಯಕ್ಷಿಕೆಗಳಾಗಿದ್ದು ಇದು ನಗರೀಕರಣದ ಬಲೆಯಲ್ಲಿ ಕೃಷಿ ಆರ್ಥಿಕತೆ ಸಿಲುಕಿ ಭಾಗಶಃ ಸ್ಥಗಿತಗೊಂಡು ಗ್ರಾಮೀಣ ಬದುಕು ಮರೆಯಾಗುತ್ತಿರುವುದು ಗಾಬರಿ ಹುಟ್ಟಿಸುತ್ತಿದೆ. ಕುಂದಾಪುರ ತಾಲೂಕಿನಲ್ಲಿ ಕಂಡುಬರುವ ಸನ್ನಿವೇಶವನ್ನು ಇಡೀ ಉಡುಪಿ ಜಿಲ್ಲೆಯಲ್ಲಿ ಗಮನಿಸುವಷ್ಟರ ಮಟ್ಟಿಗಿನ ಬದಲಾವಣೆ ಕೃಷಿ ಕ್ಷೇತ್ರದಲ್ಲಿ ಆದದ್ದು ೧೯೯೧ರ ನಂತರದಲ್ಲಿ ಈ ರೀತಿ ಬದಲಾವಣೆಯ ಕಾರಣ ಪರಿಣಾಮಗಳನ್ನು ಕಂಡುಹಿಡಿಯುವ ಪ್ರಯತ್ನ ಈವರೆಗೆ ಇಲ್ಲಿ ನಡೆದಿಲ್ಲವಾದ ಕಾರಣ ಕೃಷಿಯ ಆರ್ಥಿಕತೆ ಮತ್ತು ಕುಸಿಯುತ್ತಿರುವ ಕೃಷಿ ಚಟುವಟಿಕೆಗಳಿಂದ ಜನಜೀವನ ಆರ್ಥಿಕ ಪರಿಣಾಮಗಳನ್ನು ವಿಶ್ಲೇಷಿಸುವ ಉದ್ದೇಶದಿಂದ ತೀರಾ ಗ್ರಾಮೀಣ ಪ್ರದೇಶವಾದ ಕುಂದಾಪುರ ತಾಲೂಕಿನ ಹೊಂಬಾಡಿ–ಮಂಡಾಡಿ, ಯಡಾಡಿ–ಮತ್ಯಾಡಿ, ಜಪ್ತಿ, ಹಾರ್ದಳ್ಳಿ–ಮಂಡಳ್ಳಿ, ಹಳ್ನಾಡಿ–ಹರ್ಕಾಡಿ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕೆ ಆರಿಸಿಕೊಂಡ ಕೃಷಿ ಚಟುವಟಿಕೆಗಳು ಜನಜೀವನದ ಮೇಲಾಗುತ್ತಿರುವ ಆರ್ಥಿಕತೆಯ ಪರಿಣಾಮಗಳು ಎನ್ನುವ ವಿಷಯದ ಮುಖಾಂತರ ಸಮಸ್ಯೆಯ ಆಳವನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತ ಈ ರೀತಿಯ ಅನಪೇಕ್ಷಿತ ಬದಲಾವಣೆಗಳಿಂದ ಬದಲಾಗುತ್ತಿರುವ ಗ್ರಾಮೀಣ ಬದುಕನ್ನು ನಿಜವಾದ ಗ್ರಾಮೀಣ ಬದುಕಿನೊಂದಿಗೆ ಹೋಲಿಸಿ ನೋಡುವ ಪ್ರಯತ್ನ ಮಾಡಲಾಗಿದೆ.

## ೧.೬. ಸಂಶೋಧನಾ ವಿಧಾನಗಳು

ಪ್ರಸ್ತುತ ಅಧ್ಯಯನವು ಬದಲಾಗುತ್ತಿರುವ ಕೃಷಿ ಆರ್ಥಿಕತೆ ಕುಂದಾಪುರ ತಾಲೂಕಿನ ಒಂದು ಅದ್ಯಯನ ಎಂಬ ತಲೆ ಬರಹದ ಅಡಿಯಲ್ಲಿ ಅದ್ಯಯನಿಸಲಾಗಿದ್ದು ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಹಳ್ಳಿಗಳಾದ ಹೊಂಬಾಡಿ–ಮಂಡಾಡಿ, ಯಡಾಡಿ–ಮತ್ಯಾಡಿ, ಜಪ್ತಿ, ಹಾರ್ದಳ್ಳಿ–ಮಂಡಳ್ಳಿ, ಹಳ್ನಾಡಿ–ಹರ್ಕಾಡಿ ಗ್ರಾಮಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

**ನಮೂನೆ ಆಯ್ಕೆ(ವಿಧಾನ) :**

ಇಲ್ಲಿ ವಿಷಯ ಸಂಗ್ರಹಣೆಯನ್ನು ಮಾಡುವಾಗ ಎರಡು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಮೂನೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

೧) ಬದಲಾಗುತ್ತಿರುವ ಕೃಷಿ ಆರ್ಥಿಕತೆ ಬಗ್ಗೆ ತಿಳಿದವರನ್ನು ಆಯ್ಕೆ ಮಾಡಲಾಗಿದೆ.

೨) ಮಾದರಿ ಕೃಷಿಕರನ್ನು ಆಯ್ದುಕೊಳ್ಳಲಾಗಿದೆ. (ಪ್ರಗತಿಪರ ಕೃಷಿಕರನ್ನು) ಆಯ್ದುಕೊಳ್ಳಲಾಗಿದೆ.

**ಮಾಹಿತಿ ಸಂಗ್ರಹಣಾ ವಿಧಾನ:**

ಸಂಶೋಧನೆಯಲ್ಲಿ ಮಾಹಿತಿ ಸಂಗ್ರಹಣೆಯನ್ನು ಎರಡು ವಿಧಾನಗಳಿಂದ ಮಾಡಲಾಗುತ್ತದೆ. ಪ್ರಸ್ತುತ ಸಂಶೋಧನಾಧ್ಯಯನಕ್ಕೆ ಮಾಹಿತಿ ಸಂಗ್ರಹಿಸಲು ಎರಡು ವಿಧನಗಳನ್ನು ಬಳಸಲಾಯಿತು.

೧) ಪ್ರಾಥಮಿಕ ದತ್ತಾಂಶಗಳಿಂದ ಮಾಹಿತಿ ಸಂಗ್ರಹಣೆ

೨) ಮಾಧ್ಯಮಿಕ ದತ್ತಾಂಶಗಳಿಂದ ಮಾಹಿತಿ ಸಂಗ್ರಹಣೆ

ಪ್ರಾಥಮಿಕ ದತ್ತಾಂಶಗಳಿಂದ ಮಾಹಿತಿ ಸಂಗ್ರಹಣೆಯಲ್ಲಿ ಪ್ರಶ್ನಾವಳಿ ವಿಧಾನದಿಂದ ಸಹ ಮಾಹಿತಿ ಸಂಗ್ರಹಿಸಲಾಯಿತು. ಸಂಬಂಧಿಸಿದ ವಿಷಯಕ್ಕೆ ಅನುಗುಣವಾಗಿ ರಚಿಸಿದ ಪ್ರಶ್ನೆಗಳನ್ನು ಒಳಗೊಂಡ ಸಂದರ್ಶನ ತಪಶೀಲನ್ನು ಬಳಸಿ ವೈಯಕ್ತಿಕವಾಗಿ ಗ್ರಾಮೀಣ ಕೃಷಿಕರಿಂದ ಮಾಹಿತಿ ಸಂಗ್ರಹಿಸಲಾಯಿತು. ಪ್ರಶ್ನೆಗಳನ್ನು ಸ್ಪಷ್ಟವಾಗಿ ಸುಂದರವಾಗಿ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿಯೇ ಮುದ್ರಿಸಲಾಯಿತು. ಕನ್ನಡದಲ್ಲಿಯೇ ಹೆಚ್ಚು ಸರಳವಾಗಿ ವ್ಯವಹರಿಸಿದ್ದರಿಂದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಪಡೆಯಲು ಅನುಕೂಲವಾಯಿತು. ಸಂದರ್ಶನ ತಪಶೀಲದಲ್ಲಿದ್ದ ಎಲ್ಲಾ ಪ್ರಶ್ನೆಗಳಿಗೆ ಕೃಷಿಕರು ಬಹಳ ಆಸಕ್ತಿಯಿಂದ ಉತ್ತರ ನೀಡಿದರು.

ಮಾಧ್ಯಮಿಕ ಮಾಹಿತಿ ಸಂಗ್ರಹಣ ವಿಧಾನದಿಂದ ಅಧ್ಯಯನಕ್ಕೆ ಮಾಹಿತಿಯನ್ನು ಸಂಗ್ರಹಿಸಲಾಯಿತು. ಪುಸ್ತಕಗಳು, ಪ್ರಕಟಣೆಗಳು, ೨೦೧೧ರ ಜನಗಣತಿ, ಕೃಷಿಕರು ಹೀಗೆ ಮಾಧ್ಯಮಿಕ ಮಾಹಿತಿ ಸಂಗ್ರಹಣಾ ವಿಧಾನದಿಂದ ಮಾಹಿತಿ ಸಂಗ್ರಹಿಸಲಾಯಿತು.

## ಅಧ್ಯಯನದ ಮಿತಿ

ಕೃಷಿ ಚಟುವಟಿಕೆಗಳು ಕಡಿಮೆಯಾಗುತ್ತಿರುವ ಕುರಿತು ಜಾಗೃತಿ ಮೂಡಿಸುವ ಬರಹಗಳು ಮಾತ್ರ ಪ್ರಕಟಗೊಂಡಿದ್ದೆ ಹೊರತು ಬದಲಾಗುತ್ತಿರುವ ಕೃಷಿ ಆರ್ಥಿಕತೆಯ ಕುರಿತು ಆಳವಾದ ಸಂಶೋಧನೆಗಳು ನಡೆದಿಲ್ಲವಾದ ಕಾರಣ ಪ್ರಬಂಧದ ವಿಷಯವನ್ನು ಗಟ್ಟಿಗೊಳಿಸುವಲ್ಲಿ ತೊಂದರೆಯಾಗಿತ್ತು.

ಕುಂದಾಪುರ ತಾಲೂಕನ್ನು ಮಾತ್ರ ಅಧ್ಯಯನದ ವ್ಯಾಪ್ತಿಯಲ್ಲಿ ತೆಗೆದುಕೊಳ್ಳಬೇಕಾದ ಅನಿವಾರ್ಯತೆಯಿಂದಾಗಿ ಅಧ್ಯಯನದ ವಿಸ್ತಾರವನ್ನು ಮಿತಿಗೊಳಿಸಬೇಕಾಯಿತು.

ಅಧ್ಯಯನದ ವ್ಯಾಪ್ತಿಯಲ್ಲಿ ಬದಲಾಗುತ್ತಿರುವ ಕೃಷಿ ಆರ್ಥಿಕತೆ ಹೆಚ್ಚು ಒತ್ತುಕೊಟ್ಟ ಭತ್ತ ಮತ್ತು ಉಪಬೆಳೆಗಳ ಬಗ್ಗೆ ಹೆಚ್ಚು ವಿವರಣೆಯನ್ನು ಕೊಡದಿರುವುದು.

## ೧.೭. ಅಧ್ಯಾಯಗಳ ರಚನೆ:

ಬದಲಾಗುತ್ತಿರುವ ಕೃಷಿ ಆರ್ಥಿಕತೆ: ಕುಂದಾಪುರ ತಾಲೂಕಿನ ಒಂದು ಅಧ್ಯಯನ ಎಂಬ ಶೀರ್ಷಿಕೆಯನ್ನು ಮಾಡಿ ಇದಕ್ಕೆ ಸಂಬಂಧಿಸಿದಂತೆ ವಿವಿಧ ಶಾಸ್ತ್ರಜ್ಞರು ಬರೆದ ಗ್ರಂಥಗಳಿಂದ ಲೇಖನಗಳಿಂದ ಹಾಗೂ ಕ್ಷೇತ್ರಗಳ ಅಧ್ಯಯನದಿಂದ ಸಂಬಂಧಿಸಿದ ದತ್ತಾಂಶಗಳನ್ನು ಪಡೆಯಲಾಗಿದೆ. ಸಂಗ್ರಹಿಸಿದ ಮಾಹಿತಿಗಳನ್ನು ವ್ಯವಸ್ಥಿತವಾಗಿ ರೂಪಿಸಿ ಅವುಗಳನ್ನು ಐದು ಅಧ್ಯಾಯಗಳಲ್ಲಿ ವಿಂಗಡಿಸಿ ಬರೆಯಲಾಗಿದೆ.

**ಪ್ರಥಮ ಅಧ್ಯಾಯ ಪ್ರಸ್ತಾವನೆ:**

ಈ ಅಧ್ಯಾಯದಲ್ಲಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಪೀಠಿಕೆ, ಕೃಷಿಯ ಅರ್ಥ ಮತ್ತು ವಿವಿಧ ಶಾಸ್ತ್ರಜ್ಞರು ನೀಡಿದ ವ್ಯಾಖ್ಯೆಗಳು ಕೃಷಿಯ ಸಾರಾಂಶಗಳು ಕೃಷಿಯ ಸ್ಥಿತಿಗತಿಗಳು ಕೃಷಿ ಕಾಮಿಕರ ಸಮಸ್ಯೆಗಳು ಕರ್ನಾಟಕದಲ್ಲಿ ಕೃಷಿ ಆರ್ಥಿಕತೆಯ ಸ್ಥಿತಿಗತಿ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಗೆ ನೀಡಿದ ಕೊಡುಗೆಗಳ ಒಂದು ಪಕ್ಷಿನೋಟ ಅಲ್ಲದೇ ಇತರ ಶಾಸ್ತ್ರಜ್ಞರು ನೀಡಿದ ಸಾಹಿತ್ಯ ಪರಾಮರ್ಶೆಯನ್ನು ಈ ಅಧ್ಯಾಯದಲ್ಲಿ ಬರೆಯಲಾಗಿದೆ. ಪ್ರತಿಯೊಂದು ಅಧ್ಯಯನಕ್ಕೆ ಉಪಯೋಗಿಸಿದ ಗ್ರಂಥಗಳನ್ನು ನಿಯತಕಾಲಿಕಗಳನ್ನು ಆಕರಗ್ರಂಥ ಋಣದಲ್ಲಿ ತೋರಿಸಲಾಗಿದೆ.

**ದ್ವಿತೀಯ ಅಧ್ಯಾಯ: ಸಂಶೋಧನಾ ವಿಧಾನಗಳು:**

ಈ ಅಧ್ಯಯನಕ್ಕಾಗಿ ಬಳಸಿದ ತಂತ್ರಗಳ ವಿವಿಧ ಹಂತಗಳು ಈ ರೀತಿಯಾಗಿವೆ. ಅಧ್ಯಯನದ ಉದ್ದೇಶಗಳು, ಊಹೆಗಳು, ಅಧ್ಯಯನ ಕ್ಷೇತ್ರದ ಆಯ್ಕೆ, ಅಧ್ಯಯನ ಕ್ಷೇತ್ರದ ಹಿನ್ನೆಲೆ, ಉಡುಪಿ ಜಿಲ್ಲೆಯ ಸಂಕ್ಷಿಪ್ತ ನೋಟ, ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಂದಾಪುರ ತಾಲೂಕು ಮತ್ತು ಗ್ರಾಮಗಳ ಪರಿಚಯ ಮಾಹಿತಿ ಸಂಗ್ರಹಣಾ ನಮೂನೆ ಆಯ್ಕೆ (ವಿಧಾನ) ಅಧ್ಯಾಯ ರಚನೆಗಳನ್ನು ಒಳಗೊಂಡಿದೆ.

**ತೃತೀಯ ಅಧ್ಯಾಯದಲ್ಲಿ** ಗ್ರಾಮೀಣ ಕೃಷಿಕರು ಅಂದರೆ ಕೌಟುಂಬಿಕ ಸಾಮಾಜಿಕ ಹಿನ್ನೆಲೆಯ ಕುರಿತು ವಿವರಿಸಲಾಗಿದೆ.

**ನಾಲ್ಕನೇ ಆಧ್ಯಾಯದಲ್ಲಿ** ಗ್ರಾಮೀಣ ಕೃಷಿಕರು ಅಂದರೆ ಮಾಹಿತಿದಾರರ ಆರ್ಥಿಕ ಸ್ಥಿತಿಗತಿ ಮತ್ತು ಅವರ ಸಮಸ್ಯೆಗಳ ವಿವರಣೆ ನೀಡಲಾಗಿದೆ.

**ಐದನೇ ಅಧ್ಯಾಯದಲ್ಲಿ** ಮೇಲಿನ ಎಲ್ಲಾ ಅಧ್ಯಾಯಗಳ ಸಮಾರೋಪವಾಗಿದೆ ಹಾಗೂ ಗ್ರಾಮೀಣ ಕೃಷಿಕರ ಆರ್ಥಿಕತೆ ಮತ್ತು ಈ ಕೃಷಿ ಕಾಮಿಕರ ಸಮಸ್ಯೆಗಳ ಸುಧಾರಣೆಗೆ ಕೆಲವು ಸಲಹೆಗಳನ್ನು ನೀಡಲಾಗಿದೆ. ಹೀಗೆ ಈ ಅಧ್ಯಾಯದಲ್ಲಿ ಸಂಶೋಧನೆಯನ್ನು ಐದು ಅಧ್ಯಾಯಗಳಲ್ಲಿ ರಚಿಸಲಾಗಿದೆ.

## ೧.೮. ಉಲ್ಲೇಖಗಳು:


- ಚಂದ್ರ ಪೂಜಾರಿ ಎಂ. ೨೦೧೧ "ಸಂಶೋಧನೆ ಎನು? ಎಕೆ? ಮತ್ತು ಹೇಗೆ" ಎಂಬ ಪ್ರಬಂಧದಿಂದ ಕೆಲವು ಅಂಶಗಳನ್ನು ಆಯ್ದುಕೊಳ್ಳಲಾಗಿದೆ.
- ಕೃಷ್ಣೇಗೌಡ ಎಚ್.ಆರ್. "ಕೃಷಿ ಅರ್ಥಶಾಸ್ತ್ರ" ಎಂಬ ಗ್ರಂಥಗಳಿಂದ ಕೆಲವು ಅಂಶಗಳನ್ನು ಆಯ್ದುಕೊಳ್ಳಲಾಗಿದೆ.
- ಚಂದ್ರಶೇಖರ್ ಟಿ.ಆರ್. ೨೦೧೦ "ಹಕ್ಕು-ಹಂಗು ಅಭಿವೃದ್ಧಿ ಅಧ್ಯಯನದ ಪ್ರಬಂಧಗಳು"
- ಕೃಷ್ಣಮೂರ್ತಿ ಎಚ್.ಆರ್. ೨೦೧೧ "ಭಾರತದ ಆರ್ಥಿಕ ವ್ಯವಸ್ಥೆ" ಎಂಬ ಗ್ರಂಥಗಳಿಂದ ಕೆಲವು ಅಂಶಗಳನ್ನು ಆಯ್ದುಕೊಳ್ಳಲಾಗಿದೆ.
- ಜೋಶಿ ಮಹದೇವ ನಾರಾಯಣರಾವ್ ಜೋಶಿ, ಗುರುರಾಜ ನಾರಾಯಣ ರಾವ್ ೧೯೯೮ "ಕೃಷಿ ಅರ್ಥಶಾಸ್ತ್ರ" ಎಂಬ ಗ್ರಂಥಗಳಿಂದ ಕೆಲವು ಅಂಶಗಳನ್ನು ಆಯ್ದುಕೊಳ್ಳಲಾಗಿದೆ.
- ಜೈನ್ ನಾರಾಯಣ ಶರ್ಮ ೨೦೦೩ "ಆಲ್‌ಟರ್‌ನೇಟಿವ್ ಇಕಾನಾಮಿಕ್ಸ್ ಯ್ಯಾಂಡ್ ಇಕಾನಾಮಿಕ್ಸ್ ಆಫ್ ಮಹಾತ್ಮ ಗಾಂಧಿ ಯ್ಯಾಂಡ್ ಗ್ಲೋಬಲೈಜೇಶನ್" ಎಂಬ ಗ್ರಂಥಗಳಿಂದ ಕೆಲವು ಅಂಶಗಳನ್ನು ಆಯ್ದುಕೊಳ್ಳಲಾಗಿದೆ

## ಅಧ್ಯಾಯ-೨

# ಸಂಶೋಧನಾ ಅಧ್ಯಯನ ಕ್ಷೇತ್ರದ ಪರಿಚಯ

### ೨.೧. ಉಡುಪಿ ಜಿಲ್ಲೆಯ ಸಂಕ್ಷಿಪ್ತ ನೋಟ:

ಕರ್ನಾಟಕದಲ್ಲಿರುವ ೩೦ ಜಿಲ್ಲೆಗಳಲ್ಲಿ ಉಡುಪಿ ಜಿಲ್ಲೆಯು ಒಂದಾಗಿದ್ದು, ಇದು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಈ ಜಿಲ್ಲೆಯು ಕರ್ನಾಟಕ ರಾಜ್ಯದ ದಕ್ಷಿಣದ ಮಧ್ಯಭಾಗದಲ್ಲಿ ಇದ್ದು, ಪ್ರಮುಖ ಆಡಳಿತ ಕೇಂದ್ರವಾಗಿದೆ. ಇದರೊಂದಿಗೆ ಮಂಗಳೂರು ಪ್ರಸಿದ್ಧ ವ್ಯಾಪಾರ ಹಾಗೂ ವಾಣಿಜ್ಯ ಕೇಂದ್ರವಾಗಿರುವುದಲ್ಲದೇ ಪ್ರಮುಖ ಕೈಗಾರಿಕ ನಗರವಾಗಿದೆ. ಅಷ್ಟೇ ಅಲ್ಲದೇ ಉಡುಪಿ ಮತ್ತು ಮಂಗಳೂರು ನಗರಗಳೆರಡು ಅವಳಿ ನಗರಗಳು.

ವ್ಯಾಪಾರ, ವಾಣಿಜ್ಯ, ಸಾಹಿತ್ಯ, ಕಲೆ, ಶಿಕ್ಷಣ ಪ್ರತಿಯೊಂದು ಕ್ಷೇತ್ರದಲ್ಲೂ ಉಡುಪಿ ನಗರವು ಪ್ರಸಿದ್ಧಿಯನ್ನು ಪಡೆದಿದೆ. ಉಡುಪಿ ಜಿಲ್ಲೆಯು ದಕ್ಷಿಣ ಗೋಲಾರ್ಧ ಅಕ್ಷಾಂಶ ೧೩ಡಿಗ್ರಿ-೫ಡಿಗ್ರಿ ಯಿಂದ ೧೫ಡಿಗ್ರಿ-೩೫ಡಿಗ್ರಿ ಮತ್ತು ಉತ್ತರ ಗೋಲಾರ್ಧ ರೇಖಾಂಶ ೫೦ ಡಿಗ್ರಿ-೦೦ಡಿಗ್ರಿ ಯಿಂದ ೫೦ಡಿಗ್ರಿ-೨೦ಡಿಗ್ರಿ ಮಧ್ಯದಲ್ಲಿದೆ.

ಇದು ಸಮುದ್ರದ ತಳದಿಂದ ೮೪೧ ಅಡಿಗಳಷ್ಟು ಎತ್ತರದಲ್ಲಿದ್ದು ಸಮಶಿತೋಷ್ಣ ವಲಯದಲ್ಲಿ ಬರುತ್ತದೆ. ೧೫ಡಿಗ್ರಿ-೩೫ಡಿಗ್ರಿ ಮತ್ತು ಉತ್ತರ ಗೋಲಾರ್ಧ ರೇಖಾಂಶ ೫೦ಡಿಗ್ರಿ-೦೦ಡಿಗ್ರಿ ಯಿಂದ ೫೦ಡಿಗ್ರಿ-೨೦ಡಿಗ್ರಿಯ ಮಧ್ಯದಲ್ಲಿದೆ. ಇದು ಸಮುದ್ರದ ತಳದಿಂದ ೮೪೧ ಅಡಿಗಳಷ್ಟು ಎತ್ತರದಲ್ಲಿದ್ದು ಸಮಶಿತೋಷ್ಣ ವಲಯದಲ್ಲಿ ಬರುತ್ತದೆ. ಈ ಜಿಲ್ಲೆಯ ಉತ್ತರಕ್ಕೆ ದಕ್ಷಿಣಕನ್ನಡ ಜಿಲ್ಲೆ ದಕ್ಷಿಣಕ್ಕೆ ಉತ್ತರಕನ್ನಡ ಜಿಲ್ಲೆ ಪೂರ್ವಕ್ಕೆ ಶಿವಮೊಗ್ಗ ಜಿಲ್ಲೆ ಪಶ್ಚಿಮಕ್ಕೆ ಕೊಡಗು ಜಿಲ್ಲೆ. ಇದು ರಾಜಧಾನಿ ಬೆಂಗಳೂರಿನಿಂದ ೪೦೦ಕಿ.ಮೀ. ದೂರದಲ್ಲಿದ್ದು ಈ ನಗರವು ರಾಷ್ಟ್ರೀಯ ಹೆದ್ದಾರಿ ೬೬ರ ಮೇಲಿದ್ದು ಮಂಗಳೂರು ಹಾಗೂ ಕಾರವಾರವನ್ನು ಸಂಪಕಿಸುತ್ತದೆ. ಉಡುಪಿ ನಗರವು ಸಾಹಿತ್ಯದ ತವರೂರಾಗಿದ್ದು ಇಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯಿದೆ. ಅಷ್ಟೇ ಅಲ್ಲದೇ ಈ ನಗರವು ಮಹಾನ್ ಕವಿಗಳ ತವರೂರಾಗಿದೆ.

೧೯೯೭ರಲ್ಲಿ ಉಡುಪಿ ಜಿಲ್ಲೆಯನ್ನು ವಿಭಜಿಸಿದ್ದರಿಂದ ನೂತನ ಜಿಲ್ಲೆಯು ೩ ತಾಲೂಕುಗಳನ್ನೊಳಗೊಂಡಿದೆ. ಜಿಲ್ಲೆಯ ವಿಸ್ತಿರ್ಣವು ೬೮೨೩ಚ.ಕಿ.ಮೀ. ಇದ್ದು ರಾಜ್ಯದ ೨.೧೨ ವಿಸ್ತಿರ್ಣದ ಶೇಕಡಾ ೩.೨೨ ರಷ್ಟಿದೆ. ಆಡಳಿತ ವಿಕೇಂದ್ರೀಕರಣದ ದೃಷ್ಟಿಯಿಂದ ಜಿಲ್ಲೆಯಲ್ಲಿ ಒಂದು ಕಂದಾಯ ಉಪವಿಭಾಗವಿದ್ದು ಜಿಲ್ಲೆಯಲ್ಲಿ ೩ ತಾಲೂಕು ಅಂದರೆ ಉಡುಪಿ, ಕುಂದಾಪುರ, ಕಾರ್ಕಳ ಸೇರಿದೆ. ೨೦೧೧ರ ಜನಗಣತಿಯ ಪ್ರಕಾರ ೫೨೦ ಜನವಸತಿ ಇರುವ ಗ್ರಾಮಗಳು ಇವೆ. ಜಿಲ್ಲೆಯಲ್ಲಿ ಒಟ್ಟು ೨೦೦ ಪಟ್ಟಣ ನಗರ ಸಮುದಾಯಗಳಿದ್ದು ಕುಂದಾಪುರ ಪುರಸಭೆ, ಉಡುಪಿ ನಗರ ಪಾಲಿಕೆ, ಕಾರ್ಕಳ ಪುರಸಭೆ ಸಾಲಿಗ್ರಾಮ ಪಟ್ಟಣ ಪಂಚಾಯತ್‌ಗಳಿರುತ್ತದೆ.

೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆಯು ೧೧,೭೭,೩೬೧ ಇದ್ದು ಇದರಲ್ಲಿ ೫,೩೨,೧೨೧ ಪುರುಷರು ಮತ್ತು ೬,೧೫,೨೩೦ ಮಹಿಳೆಯರು ಇರುವುದು ಕಂಡುಬರುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಅನುಕ್ರಮವಾಗಿ ೩೨,೮೪೩ ಮತ್ತು ೨೬,೦೮೭ ಇರುತ್ತದೆ. ಈಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪ್ರಮಾಣ ಶೇಕಡಾ ೫.೮ ರಷ್ಟು ಇರುವುದು. ಲಿಂಗಾನುಪಾತ ೯೫೬(೧೦೦೦ ಪುರುಷರು). ಈ ಜಿಲ್ಲೆಯಲ್ಲಿ ಒಟ್ಟು ಗ್ರಾಮಗಳು ೫೨೦ ಇದ್ದು ೧೨೭ ಗ್ರಾಮಪಂಚಾಯತಿಗಳಿವೆ. ಉಡುಪಿ ಜಿಲ್ಲೆಯಲ್ಲಿನ ಒಟ್ಟು ಬ್ಯಾಂಕ್‌ಗಳು ೨೧೭ ಸಹಕಾರಿ ಸಂಘಗಳು ೭ ಅಂಚೆ ಕಛೇರಿಗಳು ೨೫೦ ನ್ಯಾಯಬೆಲೆ ಅಂಗಡಿಗಳು ೪೦೦.

೨೦೧೧ರ ಜನಗಣತಿಯ ಪ್ರಕಾರ ಒಟ್ಟು ಸಾಕ್ಷರತೆ ಜನಸಂಖ್ಯೆ ೧,೦೨,೯೪೧ ಇದರಲ್ಲಿ ೪೦,೫೩೮ ಪುರುಷರು ೬೨,೪೦೩ ಮಹಿಳೆಯರು ಇರುವರು.

೨೦೧೧ರ ಜನಗಣತಿಯ ಪ್ರಕಾರ ೨,೨೧,೩೧೨ ಲಕ್ಷ ಕೆಲಸಗಾರರಿದ್ದಾರೆ. ಕೆಲಸಗಾರರು ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇಕಡಾ ೪೩ ರಷ್ಟು ಆಗುವುದು ಅದರಲ್ಲಿ ೧೫೦೭೯ ಜನ ಮುಖ್ಯ ಕೆಲಸಗಾರರು ೯೮೦೦ಜನ ಅಲ್ಪಾವದಿ ಕೆಲಸಗಾರರಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಒಟ್ಟು ೧,೨೫,೮೧೭ ಕುಟುಂಬಗಳಿದ್ದು ಅದರಲ್ಲಿ ೫೯,೮೫೭ ಗ್ರಾಮೀಣ ಪ್ರದೇಶದಲ್ಲಿ ಮತ್ತು  ೨,೬೦,೭೦೭ ಕುಟುಂಬಗಳು ಪಟ್ಟಣ ಪ್ರದೇಶದಲ್ಲಿರುವುವು. ಸಾಂಕ್ರಾಮಿಕ ರೋಗದಿಂದ ಪಶು ಸಂಪತ್ತನ್ನು ರಕ್ಷಿಸಲು ಪಶು ವೈದ್ಯಕೀಯ ಸೌಲಭ್ಯಗಳು ಅತೀ ಅವಶ್ಯಕ. ಜಿಲ್ಲೆಯಲ್ಲಿ ೫೦ ಪಶುವೈದ್ಯ ಆಸ್ಪತ್ರೆಗಳು ೩೯ ಕೃತಕ ಗರ್ಭಧಾರಣಾ ಕೇಂದ್ರಗಳಿವೆ. ಉಡುಪಿ ಜಿಲ್ಲೆಯಲ್ಲಿ ಉತ್ತರದ ೩ ಕಿ.ಮೀ. ದೂರದ ಮಣಿಪಾಲದಲ್ಲಿ ವೈದ್ಯಕೀಯ ಮತ್ತು ಶಿಕ್ಷಣ ತರಬೇತಿ ಎಂಜಿನಿಯರಿಂಗ್ ಕಾಲೇಜುಗಳಿವೆ. ಉಡುಪಿ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಶೈಕ್ಷಣಿಕ ಕ್ಷೇತ್ರದಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಉಡುಪಿಯಲ್ಲಿ ಒಂದು ವಿಶ್ವವಿದ್ಯಾಲಯವಿದ್ದು ಮಣಿಪಾಲ ವಿಶ್ವ ವಿದ್ಯಾಲಯ ಇದನ್ನು ೧೯೫೧ರಲ್ಲಿ ಸ್ಥಾಪಿಸಲಾಯಿತು ಜೊತೆಗೆ ಸಂಶೋಧನಾ ಕೇಂದ್ರವು ಆಗಿದೆ. ಅದರ ಜೊತೆಗೆ ಇಂಜಿನಿಯರಿಂಗ್ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವಾಗಿದೆ. ಪ್ರಸ್ತುತ ಉಡುಪಿ ಜಿಲ್ಲೆಯಲ್ಲಿ ೩೪೩ ಪ್ರಾಥಮಿಕ ಶಾಲೆಗಳು ೧೦೦ ಪ್ರೌಢ ಶಾಲೆಗಳು ೩೫ ಪದವಿಪೂರ್ವ ಕಾಲೇಜುಗಳು ೧೦ ಸರಕಾರಿ ಕಾಲೇಜುಗಳು ಇವೆ. ೨೫ ಖಾಸಗಿ ಕಾಲೇಜುಗಳು ಮಣಿಪಾಲದಲ್ಲಿ ವೈದ್ಯಕೀಯ ೨ ಮತ್ತು ೨ ಇಂಜಿನಿಯರಿಂಗ್ ಕಾಲೇಜುಗಳಿವೆ. ಪಾಲಿಟೆಕ್ನಿಕ್ ಕಾಲೇಜು, ದಂತ ಕಾಲೇಜು ಉದ್ಯಾವರ ಆಯುರ್ವೆದ ಕಾಲೇಜುಗಳು ಇವೆ. ಕನ್ನಡ ವಿಶ್ವವಿದ್ಯಾಲಯ ಮುಕ್ತ ವಿಶ್ವವಿದ್ಯಾಲಯದ ಉಪಕಛೇರಿ ಸಹ ಉಡುಪಿಯಲ್ಲಿ ಇದೆ.

ಕರ್ನಾಟಕ ರಾಜ್ಯ ಮತ್ತು ಉಡುಪಿ ಜಿಲ್ಲೆಯ ಒಟ್ಟು ಜನಸಂಖ್ಯೆ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿಯ ಸ್ತ್ರೀ–ಪುರುಷರ ಅಂಕಿ ಅಂಶಗಳನ್ನು ಈ ಮುಂದಿನ ಕೋಷ್ಠದಲ್ಲಿ ನೋಡಬಹುದಾಗಿದೆ.

**ಕೋಷ್ಟಕ ೨.೧ ಕರ್ನಾಟಕ ರಾಜ್ಯ ಮತ್ತು ಉಡುಪಿ ಜಿಲ್ಲೆಯ ಒಟ್ಟು ಜನಸಂಖ್ಯೆ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿಯ ಸ್ತ್ರೀ–ಪುರುಷರ ಅಂಕಿ ಅಂಶ**

| | ಒಟ್ಟು ಜನಸಂಖ್ಯೆ | ಪುರುಷರು | ಮಹಿಳೆಯರು |
|---|---|---|---|
| **ಕರ್ನಾಟಕ** | ೫೨.೮೫೦.೫೬೦ | ೨೬,೮೯೮,೯೧೮ | ೨೫,೯೫೧,೬೪೪ |
| ಗ್ರಾಮೀಣ | ೩೪,೮೮೯,೦೩೩ | ೧೭,೬೪೮,೯೫೮ | ೧೭,೨೪೦೦೭೫ |
| ನಗರ | ೧೭,೯೬೧,೫೨೯ | ೯,೨೪೯,೯೬೦ | ೮,೭೧೧,೫೬೯ |
| **ಉಡುಪಿ** | ೧,೧೭೭,೩೬೧ | ೫೩೨,೧೩೧ | ೬೧೫,೨೩೦ |
| ಗ್ರಾಮೀಣ | ೮೪೩,೩೦೦ | ೩೭,೯೦೨ | ೩೬,೩೯೧ |
| ನಗರ | ೩೩೪,೦೬೧ | ೧೬೩,೨೮೪ | ೧೭೦,೭೭೭ |

**ಮೂಲ:** ೨೦೧೧ ಜನಗಣತಿ ಜಿಲ್ಲಾ ಜನಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ ಉಡುಪಿ

ಮೇಲಿನ ಕೋಷ್ಟಕದ ವಿವರಣೆಯಂತೆ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣರ ಸಂಖ್ಯೆಯು ಅಧಿಕವಾಗಿರುವುದು ಕಂಡುಬರುತ್ತದೆ. ಅದೇ ರೀತಿಯಾಗಿ ಪುರುಷ ಮತ್ತು ಸ್ತ್ರೀಯರ ಪ್ರಮಾಣ ಸರಾಸರಿಯಾಗಿದೆ. ಉಡುಪಿ ಜಿಲ್ಲೆಯ ಗ್ರಾಮೀಣ ಜನಸಂಖ್ಯೆಯ ನಗರಕ್ಕೆ ಹೋಲಿಸಿದಾಗ ನಗರ ಪ್ರದೇಶದಲ್ಲಿ ಜನಸಂಖ್ಯೆ ಕಡಿಮೆ ಇದೆ. ಸ್ತ್ರೀ ಪುರುಷರ ಪ್ರಮಾಣವು ಸರಾಸರಿಯಾಗಿರುವುದು ಇದರಿಂದ ತಿಳಿಯಬಹುದು.

**ಕೋಷ್ಟಕ ೨.೨ ಉಡುಪಿ ಜಿಲ್ಲೆಯ ಒಟ್ಟು ಧರ್ಮ ವಾರು ಜನಸಂಖ್ಯೆ:**

| ಕ್ರ.ಸಂ. | ಧರ್ಮ | ಜನಸಂಖ್ಯೆ |
|---|---|---|
| ೧ | ಹಿಂದೂ | ೧,೦೦೯,೧೭೨ |
| ೨ | ಮುಸ್ಲಿಂ | ೯೬,೭೯೦ |
| ೩ | ಕ್ರಿಶ್ಚಿಯನ್ | ೬೫,೮೩೨ |
| ೪ | ಸಿಖ್ | ೨೩೨ |
| ೫ | ಜೈನ್ | ೪,೫೩೪ |
| ೬ | ಬೌದ್ಧ | ೧೬೧ |
| ೭ | ಇತರೆ | ೧೫೫ |
| ೮ | ಧರ್ಮ ಗೊತ್ತಿಲ್ಲ | ೫೨೨ |
| | ಒಟ್ಟು | ೧೧,೭೭,೩೪೮ |

**ಮೂಲ:** ೨೦೧೧ ಜನಗಣತಿ ಜಿಲ್ಲಾ ಜನಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ ಉಡುಪಿ

ಮೆಲಿನ ಕೋಷ್ಟಕದ ವಿವರಣೆಯಂತೆ ಉಡುಪಿ ಜಿಲ್ಲೆಯಲ್ಲಿ ಪ್ರಮುಖವಾಗಿ ನಾಲ್ಕು ಧರ್ಮಗಳು ಕಂಡುಬರುತ್ತದೆ. ಅದರಲ್ಲಿ ೧,೦೦೯,೧೭೨ ಇದ್ದು. ಈ ಧರ್ಮದವರ ಸಂಖ್ಯೆಯು ಅಧಿಕವಾಗಿರುವುದು ಕಂಡುಬರುತ್ತದೆ. ಇನ್ನುಳಿದಂತೆ ಮುಸ್ಲಿಂ ಧರ್ಮದವರು ೯೬,೭೪೦, ಕ್ರಿಶ್ಚಿಯನ್ ಧರ್ಮದವರು ೬೫,೮೩೨ ಜೈನ ಧರ್ಮದವರು ೪,೫೩೪ ಸಿಖ್ ಧರ್ಮದವರು ೨೩೨, ಬೌದ್ಧ ಧರ್ಮದವರು ೧೬೧, ಧರ್ಮ ಗೊತ್ತಿಲ್ಲ ಎಂದವರು ೫೨೨ ಹಾಗೂ ಇತರೆ ಧರ್ಮದವರು ೧೫೫ ಜನಸಂಖ್ಯೆ ಇರುವುದನ್ನು ಕಾಣಬಹುದಾಗಿದೆ.

## ಪ್ರಾಕೃತಿಕ ಪರಿಚಯ:

ಜಿಲ್ಲೆಯಲ್ಲಿ ಹವಮಾನ ಸಾಮಾನ್ಯವಾಗಿ ಹಿತಕರ ಮತ್ತು ಆರೋಗ್ಯಕರವಾಗಿದೆ. ಮಾರ್ಚ್ ನಿಂದ ಮೇ ತಿಂಗಳ ಅಂತ್ಯದವರೆಗೆ ಕಡು ಬೇಸಿಗೆಯಿದ್ದು ವಿರಳವಾಗಿ ಮಳೆಯಾಗುತ್ತದೆ. ಜೂನ್ ನಿಂದ ಸಪ್ಟೆಂಬರ್ ಅಂತ್ಯದವರೆಗೆ ಭರಿ ಮಳೆಯಾಗುತ್ತದೆ. ಡಿಸೆಂಬರ್ ನಿಂದ ಪೆಬ್ರವರಿ ಮಧ್ಯದವರೆಗೆ ಚಳಿಗಾಲವಿರುತ್ತದೆ. ಎಪ್ರೀಲ್ ಮೇ ತಿಂಗಳಲ್ಲಿ ಗರಿಷ್ಠ ಉಷ್ಣತೆ ೩೮ಡಿಗ್ರಿ ಸೆ. ವರೆಗೂ ಡಿಸೆಂಬರ್ ಜನವರಿ ತಿಂಗಳಲ್ಲಿ ಕನಿಷ್ಠ ಉಷ್ಣಾಂಶ ೧೭ಡಿಗ್ರಿ ಸೆ. ವರೆಗೂ ಇರುತ್ತದೆ. ಜಿಲ್ಲೆಯಲ್ಲಿ ಸದಾ ಕಟ್ಟಡಕ್ಕೆ ಬೇಕದ ಕಲ್ಲುಗಳು ಮತ್ತು ಇಟ್ಟಿಗೆಗೆ ಬೇಕಾದ ಮರಳು ಮಿಶ್ರಿತ ಕೆಂಪು ಮಣ್ಣು ಪಲವತ್ತಾದ ಮೆಕ್ಕಲು ಜೇಡಿಮಣ್ಣು ಸಣ್ಣ ಕಲ್ಲು ಪದರಗಳು ರಚನೆಗಳಗಿವೆ. ಖನಿಜ ನಿಕ್ಷೇಪಗಳು ಕೊಡಚಾದ್ರಿಯ ಬಳಿ ಹೇರಳವಾಗಿ ಕಂಡುಬರುತ್ತದೆ.

ಉಡುಪಿ ಜಿಲ್ಲೆಯ ಮಳೆಯ ಪ್ರಮಾಣ ೬೩೩೫ ರಿಂದ ೬೪೬೪ ಮಿ.ಮೀ ಮಳೆ ಇದ್ದು ೨೦೧೭ರಲ್ಲಿ ೬೩೦೦ ಮಿ.ಮೀ ಮಳೆಯಾಗಿದೆ. ಉಡುಪಿ ಮತ್ತು ಕಾರ್ಕಳದಲ್ಲಿ ೪೩೦೦ ಮಿ.ಮೀ. ಮಳೆ ಆಗಿರುತ್ತದೆ.

ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೬೮೨೩ ಲಕ್ಷ ಹೆ. ಗಳಿದ್ದು ಇದರಲ್ಲಿ ಅರಣ್ಯ ೯೯ಲಕ್ಷ ಹೆ., ಸಾಗುವಳಿಗೆ ಲಭ್ಯವಿಲ್ಲದ ಭೂಮಿ ೦.೨ ಲಕ್ಷ ಹೆ. ಬೀಳು ಭೂಮಿ ಹೊರತುಪಡಿಸಿ ಸಾಗುವಳಿ ಮಾಡದಿರುವ ಇತರ ಬೀಳು ಭೂಮಿ ೦.೮ ಲಕ್ಷ ಹೆ. ೨೦೧೬-೧೭ನೇ ಸಾಲಿನಲ್ಲಿ ಒಟ್ಟು ಬಿತ್ತನೆಯಾದ ಪ್ರದೇಶ ೧,೨೨,೧೩೨ ಹೆಕ್ಟೇರು.

ಉಡುಪಿ ಜಿಲ್ಲೆಯಲ್ಲಿ ಭತ್ತ ಪ್ರಮುಖ ಬೆಳೆಯಾಗಿದ್ದು ವ್ಯಾಪಾರಕ್ಕೆ ಪ್ರಸಿದ್ದವಾಗಿದೆ. ಪ್ರಮುಖ ಬೆಳೆಗಳೆಂದರೆ ಅಡಿಕೆ, ರಾಗಿ, ಉದ್ದು, ಹೆಸರು, ಹುರುಳಿ, ಅವರೆ ಗೆಣಸು, ಪರಂಗಿ, ಗೋಡಂಬಿ, ಮೆಣಸಿನಕಾಯಿ, ಹಲಸು, ಬಾಳೆಗಳು ಮುಂತಾದವುಗಳನ್ನು ಹೆಚ್ಚಾಗಿ ಬೆಳೆಯಲಾಗುತ್ತದೆ.

ಉಡುಪಿ ಜಿಲ್ಲೆಯಲ್ಲಿ ಅನೇಕ ಕಾರ್ಖಾನೆಗಳಿವೆ. ಮರಕೊಯ್ಯುವ ಕಾರ್ಖಾನೆ, ತೆಂಗಿನ ನಾರಿನಿಂದ ಹಗ್ಗ ಜಮಖಾನೆ ತಯಾರಿಸುವ ಕಾರ್ಖಾನೆ ಗೋಡಂಬಿ ಸಂಸ್ಕರಣಾ ಕಾರ್ಖಾನೆಗಳು, ಗಿರಣಿಗಳು, ಉಕ್ಕಿನ ಉಪಕರಣಗಳು ಮೋಟಾರು ವಾಹನದ ಬಿಡಿ ಭಾಗಗಳು ಲೋಹದ ಪಾತ್ರೆಗಳು ಮುದ್ರಣ ಪತ್ರಿಕೋದ್ಯಮಗಳಿಗೆ ಉಡುಪಿ ಜಿಲ್ಲೆ ಎತ್ತಿದ ಕೈ, ಬೆಲ್ಲ ತಯಾರಿಸುವ ಕಾರ್ಖಾನೆ ಸಹ ಉಡುಪಿ ಜಿಲ್ಲೆಯಲ್ಲಿದೆ.

**ಕೃಷಿಯ ಅರ್ಥ:**

ಜಮೀನಿನ ಸಾಗುವಳಿಗೆ ಸಂಬಂಧಿಸಿದ ಚಟುವಟಿಕೆಗೆ ಕೃಷಿ ಎಂದು ಹೆಸರು. ಕೃಷಿಯು ಜೀವನಾಧಾರದ ಕಸುಬಾಗಿದೆ. ಅದು ಜಮೀನನ್ನು ಉಳುವುದು, ಬಿತ್ತನೆ ಮಾಡುವುದು, ನೀರು ಹಾಯಿಸುವುದು, ಕಳೆ ತೆಗೆಯುವಿಕೆ, ಬೆಳೆಯನ್ನು ಕಟಾವು ಮಾಡುವಿಕೆ, ಒಟ್ಟಿನಲ್ಲಿ ಹೇಳುವುದಾದರೆ ಕೃಷಿಯು ಜಮೀನಿನಲ್ಲಿ ಬೆಳೆಯನ್ನು ತೆಗೆಯುವ ಚಟುವಟಿಕೆಯಾಗಿದೆ. "ಕೃಷಿಯಲ್ಲಿ ನಿರತರಾಗಿರುವ ಜನವರ್ಗವನ್ನು ರೈತರು, ಕೃಷಿಕರು ಬೇಸಾಯಗಾರರು, ವ್ಯವಸಾಯಗಾರರು, ಸಾಗುವಳಿದಾರರು ಎಂದು ವಿವಿಧ ಹೆಸರುಗಳಿಂದ ಕರೆಯುತ್ತಾರೆ.

**ಕರಾವಳಿ ಕೃಷಿ ಸಂಸ್ಕೃತಿ**

ಸಮುದ್ರ ತೀರದ ಸಮೀಪದ ಮರಳು ಮಿಶ್ರಿತ ಮಣ್ಣು ಅದಕ್ಕೆ ಮುಖಾಮುಖಿಯಾಗಿ ತಲೆಯೆತ್ತಿ ನಿಂತ ಪಶ್ಚಿಮ ಘಟ್ಟದ ಸಾಲುಗಳು ಅದರ ಮಧ್ಯದಲ್ಲಿ ದೋಣಿಯಾಕಾರದಲ್ಲಿ ಹಬ್ಬಿರುವ ಈ ಮಣ್ಣಲ್ಲಿ ಕೃಷಿಯ ಅನ್ವೇಷಣೆ ಕರಾವಳಿ ತೀರದ ಉದ್ದಕ್ಕೂ ಕಾಣಿಸುವ ಎತ್ತರವಾದ ಬೆಟ್ಟಗುಡ್ಡಗಳು ಅದರ ಬುಡದಲ್ಲಿರುವ ವಿಸ್ತಾರವಾದ ಪ್ರದೇಶಗಳು ಹೀಗೆ ನದಿ, ಹಳ್ಳ–ಕೊಳ್ಳ, ಗುಡ್ಡ–ಬೆಟ್ಟ, ಕಡಲುಗಳಿಂದ ಕೂಡಿದ ವಿಶಿಷ್ಟವಾದ ಪ್ರದೇಶವಾಗಿದೆ. ಕೃಷಿ ಕರಾವಳಿ ಸಂಸ್ಕೃತಿಯಾದ ಸೌರಮಾನ ಯುಗಾದಿ, ಹೊಸತು ಇತ್ಯಾದಿ ಕರಾವಳಿ ಸಂಸ್ಕೃತಿಯನ್ನು ಕಾಣಬಹುದಾಗಿದೆ. ತುಳು ಜನಪದ ಆರಾಧನೆಯಲ್ಲಿ ಬರುವ ಭೂತಗಳ ಪರಿಕಲ್ಪನೆಯಲ್ಲಿ ಭೂತಗಳ ಪರಿಕಲ್ಪನೆಯಲ್ಲಿ ಪ್ರಾಣಿಜಗತ್ತು ಕೃಷಿ ಜಗತ್ತಿಗೆ ಒಂದಿಷ್ಟು ಸಾಮೀಪ್ಯವನ್ನು ಒದಗಿಸುತ್ತದೆ.

ಕೃಷಿ ಪ್ರಧಾನ ದೇಶವಾಗಿದ್ದುಕೊಂಡು ಹಳ್ಳಿಗಳನ್ನೆ ಆಶ್ರಯಿಸಿಕೊಂಡಿರುವ ಭಾರತದ ಕೃಷಿರಂಗ ಬೆಳೆದು ಬಂದ ದಾರಿ ವಿಭಿನ್ನವಾದುದು ಅರ್ಥ ವ್ಯವಸ್ಥೆಯು ಕೃಷಿ ಬೆಳವಣಿಗೆಯೊಂದಿಗೆ ಕಟ್ಟಿಕೊಳ್ಳುತ್ತಾ ಹೋದಂತೆಯೇ ಕೃಷಿ ಆರ್ಥಿಕತೆಯ ಬದಲಾವಣೆಯ ಅಧ್ಯಯನ ಕೈಗೊಳ್ಳುವುದು ಪ್ರಸ್ತುತ ದಿನಗಳಲ್ಲಿ ಅತ್ಯವಶ್ಯಕವಾಗಿದೆ. ಯಾಕೆಂದರೆ ಈ ಮುಂಚೆ ಕೈಗೊಂಡ ಹಲವಾರು ಅಧ್ಯಯನಗಳು ಕೃಷಿ ಕಾರ್ಮಿಕರ ಸಾಮಾಜಿಕ ರಾಜಕೀಯ ನಮಸ್ಯೆಗಳ ಮೇಲೆಯೇ ಕೇಂದ್ರಿಕೃತಗೊಂಡಿರುವುದರಿಂದ ಬದಲಾಗುತ್ತಿರುವ ಕೃಷಿ ಆರ್ಥಿಕ ಬದಲಾವಣೆ ಕುರಿತ ಅಧ್ಯಯನಕ್ಕೆ ಅಷ್ಟೊಂದು ಆಧ್ಯತೆ ನೀಡದೆ ಇರುವುದು ಕಂಡುಬರುತ್ತದೆ. ಆದ್ದರಿಂದ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಮುಂಚೂಣಿಯಲ್ಲಿರುವ ನಮ್ಮ ದೇಶದ ಗ್ರಾಮೀಣ ಪ್ರದೇಶದ ಬದಲಾಗುತ್ತಿರುವ ಕೃಷಿ ಆರ್ಥಿಕತೆ ಅಧ್ಯಯನ ಅವಶ್ಯಕವಾಗಿದ್ದು. ಇದು ಬದಲಾಗುತ್ತಿರುವ ಕೃಷಿ ಆರ್ಥಿಕತೆ ಜೊತೆಗೆ ವಿವಿಧ ವಲಯಗಳ ಮೇಲೆ ಬೆಳಕನ್ನು ಚೆಲ್ಲಬಹುದಾಗಿದೆ.

ಪ್ರಸ್ತುತ ದಿನಗಳಲ್ಲಿ ಕೃಷಿಯು ಕುಗ್ಗುತ್ತಿರುವುದನ್ನು ಸಮಸ್ಯೆ ಎಂದೇ ಪರಿಗಣಿಸಬಹುದಾಗಿದೆ. ಎಕೆಂದರೆ ಬದಲಾಗುತ್ತಿರುವ ಕೃಷಿ ಆರ್ಥಿಕತೆ, ಕೃಷಿ ಕಾರ್ಮಿಕರು ಬೇರೆ ಬೇರೆ ಸಾಮಾಜಿಕ ಆರ್ಥಿಕ ಮತ್ತಿತರ ಕಾರಣಗಳಿಂದ ಯಾವತ್ತೂ ಹೆಚ್ಚು ಕೆಲಸ ಮಾಡುವರಾಗಿರುತ್ತಾರೆ, ಕಡಿಮೆ ಆದಾಯದವರಾಗಿರುತ್ತಾರೆ. ಹೆಚ್ಚು ಶಿಕ್ಷೆಗೆ

ಒಳಗಾಗುವವರಾಗಿರುತ್ತಾರೆ ಮತ್ತು ಹೆಚ್ಚಿನ ಆದಾಯ ಸಂಬಂಧಿತ ಸವಾಲುಗಳನ್ನು ಎದುರಿಸುವವರಾಗಿರುತ್ತಾರೆ. ಈ ನಿಟ್ಟಿನಲ್ಲಿ ಬದಲಾಗುತ್ತಿರುವ ಕೃಷಿ ಆರ್ಥಿಕತೆ ಬಗ್ಗೆ ಹಾಗೂ ಆರ್ಥಿಕತೆ ಜೊತೆಗೆ ಕೃಷಿ ಸಮಸ್ಯೆಗಳ ಬಗ್ಗೆ ಗಮನವನ್ನು ಕೇಂದ್ರಿಕರಿಸುವುದು ಹಾಗೂ ಅಧ್ಯಯನ ಮಾಡುವುದು ಅವಶ್ಯಕವಾಗಿದೆ ಎನ್ನಬಹುದು.

ಗ್ರಾಮೀಣ ಕೃಷಿಕರು ಹಲವಾರು ಸಮಸ್ಯೆಗಳಿಂದ ಬಳಲುತ್ತಿದ್ದು ಇದರ ಜೊತೆಗೆ ಕೃಷಿ ಕಾರ್ಮಿಕರ ಸಮಸ್ಯೆಗಳನ್ನು ನಾವು ಗಮನಿಸಬಹುದಾಗಿದೆ. ಹಾಗೂ ಕೃಷಿ ಕಾರ್ಮಿಕರ ಆರೋಗ್ಯ ಸೌಲಭ್ಯಗಳು ಅವರಿಗೆ ಇದೆಯೇ ಎಂಬುವುದನ್ನು ಹಾಗೂ ಅವುಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದಾರೆಯೇ ಎನ್ನುವಂತಹ ಹಲವಾರು ವಿಷಯಗಳ ಕುರಿತು ತಿಳಿದುಕೊಳ್ಳಲು ಪ್ರಸ್ತುತ ಅಧ್ಯಯನ ಗಮನ ಹರಿಸುವುದು.

ಇಂದಿನ ದಿನಗಳಲ್ಲಿ ನಾವು ಗ್ರಾಮೀಣ ಪ್ರದೇಶದ ಕೃಷಿ ಕುಗ್ಗುತ್ತಿರುವುದು ಜೊತೆಗೆ ಬದಲಾಗುತ್ತಿರುವ ಕೃಷಿ ಆರ್ಥಿಕತೆಯ ಸ್ಥಿತಿಗತಿಗಳೇನು ಎಂಬುದನ್ನು ತಿಳಿದುಕೊಂಡರೆ ನಾವೆಲ್ಲಾ ಸೇರಿ ಮಾಡಬೇಕಾದ ಕೆಲಸ ಎನು ಎಂಬುದನ್ನು ಅರ್ಥ ಮಾಡಿಕೊಳ್ಳಲು ಅನುಕೂಲವಾಗುತ್ತದೆ. ಆ ದೃಷ್ಟಿ ಕೋನದಲ್ಲಿ ಇಂತಹ ಹಲವಾರು ವಿಷಯಗಳ ಸಮಗ್ರ ಮಾಹಿತಿಯ ಅಧ್ಯಯನಕ್ಕೆ ಅಷ್ಟೊಂದು ಆಧ್ಯತೆ ನೀಡದೆ ಇರುವುದು ಕಂಡುಬರುತ್ತದೆ. ಯಾವುದೇ ಸಂಶೋಧನೆಯು ಯಶಸ್ವಿಯಾಗಬೇಕಾದರೆ ಆ ಸಂಶೋಧನೆಯ ಅಧ್ಯಯನ ವಿಧಾನವು ವೈಜ್ಞಾನಿಕವಾಗಿರಬೇಕು. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಒಂದು ವಿವರಣಾತ್ಮಕ ಅಧ್ಯಯನವಾಗಿದ್ದು ಕ್ಷೇತ್ರ ಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಪಲಿತಾಂಶಗಳನ್ನು ಕಂಡುಕೊಳ್ಳುವುದರ ಮೂಲಕ ಈ ಅಧ್ಯಯನವನ್ನು ಮಾಡಲಾಗಿದೆ.

## ವ್ಯವಸಾಯ ಸಂಬಂಧಿ ಆಚರಣೆಗಳು:

ಕೃಷಿಯನ್ನು ಪ್ರಧಾನ ವೃತ್ತಿಯಾಗಿ ಅವಲಂಬಿಸಿರುವ ಜನತೆ ಆ ವೃತ್ತಿಗನುಗುಣವಾದ ಒಂದು ಜೀವನ ಪದ್ಧತಿಯನ್ನು ರೂಢಿಸಿಕೊಂಡಿರುವುದು. ಸ್ವಾಭಾವಿಕ ಈ ಜನ ತಮ್ಮ ಜೀವನ ಚಕ್ರದ ಬಹುಮುಖ್ಯ ಘಟ್ಟಗಳಲ್ಲಿ ಆಚರಿಸುವ ಸಂಪ್ರದಾಯಗಳಲ್ಲದೇ ಹೊಟ್ಟೆಪಾಡಿಗಾಗಿ ತಾವು ಅವಲಂಬಿಸಿರುವ ಕಸುಬಿನ ಹಿನ್ನೆಲೆಯಲ್ಲೂ ಅನೇಕರು ಸಂಪ್ರದಾಯಗಳನ್ನು ರೂಢಿಸಿಕೊಂಡಿರುವುದು ಸಾಮಾನ್ಯ.

ಭೌಗೋಳಿಕ ಮತ್ತು ಸಾಮಾಜಿಕ ವೈಶಿಷ್ಟ್ಯಗಳ ಆಧಾರದ ಮೇಲೆ ವಿಭಿನ್ನ ಸ್ವರೂಪದ ಕೃಷಿ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಉತ್ತರ ಕರ್ನಾಟಕದ ವಿಭಿನ್ನ ಕೃಷಿ ಆಚರಣೆಗಳು ಭಿನ್ನವಾಗಿರುತ್ತದೆ, ಆ ಪ್ರದೇಶದ ಬೌಗೋಳಿಕ ಹಾಗೂ ಸಾಮಾಜಿಕ ವೈಶಿಷ್ಟ್ಯಗಳ ಅನುಗುಣವಾಗಿ ವ್ಯವಸಾಯ ಸಂಬಂಧಿ ಆಚರಣೆಗಳನ್ನು ಕಾಣಬಹುದಾಗಿದೆ. ದಕ್ಷಿಣಕನ್ನಡ ಜಿಲ್ಲೆಗಳಿಂದ ಸೌರಮಾನ ಯುಗಾದಿ ಆಚರಣೆ ಮತ್ತು ಹೊಸತು ಎಂಬ ವಿಭಿನ್ನ ಆಚರಣೆಗಳನ್ನು ಕಾಣಬಹುದಾಗಿದೆ.

## ೨.೨. ಅಧ್ಯಯನ ಕ್ಷೇತ್ರಕ್ಕೆ ಆಯ್ಕೆ ಮಾಡಿಕೊಂಡ ಕುಂದಾಪುರ ತಾಲೂಕು ಮತ್ತು ಗ್ರಾಮಗಳ ಪರಿಚಯ:

ಉಡುಪಿ ಜಿಲ್ಲೆಯಲ್ಲಿರುವ ೩ ತಾಲೂಕುಗಳಲ್ಲಿ ಕುಂದಾಪುರ ತಾಲೂಕು ಕೂಡ ಒಂದಾಗಿದ್ದು, ಇದು ಸಮುದ್ರ ತೀರವನ್ನು ಹೊಂದಿದೆ. ಈ ತಾಲೂಕಿನ ವಿಸ್ತೀರ್ಣವು ೨೩.೦೬ ಚ.ಕಿ.ಮೀ. ಇದ್ದು ೨೦೧೧ ರ ಜನಗಣತಿಯ ಪ್ರಕಾರ ತಾಲೂಕಿನ ಜನಸಂಖ್ಯೆಯು ೩೯೮೪೧ ಇದರಲ್ಲಿ ೨೧೩೮೫ ನಪುರುಷರು ಮತ್ತು ೧೯,೫೭೧ ಮಹಿಳೆಯರು ಇರುವುದು ಕಂಡುಬರುತ್ತದೆ. ಪರಿಶಿಷ್ಟ ಜಾತಿಯ ಜನಸಂಖ್ಯೆ ೨೨,೭೪೯ ಹಾಗೂ ಪರಿಶಿಷ್ಟ ಪಂಗಡದ ಜನಸಂಖ್ಯೆ ೧೪,೭೧೯ ಇರುತ್ತದೆ. ಈ ತಾಲೂಕಿನಲ್ಲಿ ಒಟ್ಟು ೯೮ ಗ್ರಾಮಗಳು ೩೮ ಗ್ರಾಮ ಪಂಚಾಯತಿಗಳು ೬೦ ನ್ಯಾಯಬೆಯೆ ಅಂಗಡಿಗಳು ೨ ಪೋಲಿಸ್ ಠಾಣೆಗಳು ೧ ಅಗ್ನಿಶಾಮಕ ಠಾಣೆ ೧ ಪಶುವೈದ್ಯ ಆಸ್ಪತ್ರೆ, ೧೨ ಪಶು ಚಿಕಿತ್ಸಾಲಯಗಳು ೧೦ ಕೃತಕ ಗರ್ಭಧಾರಣ ಕೇಂದ್ರಗಳು ೧೦ ವಾಣಿಜ್ಯ ಬ್ಯಾಂಕ್‌ಗಳು ೮ ಗ್ರಾಮೀಣ ಬ್ಯಾಂಕ್ ೧೫ ಸಹಕಾರಿ ಬ್ಯಾಂಕ್‌ಗಳು ೨೦ ಅಂಚೆಕಚೇರಿಗಳು ೨ ದೂರವಾಣಿ ವಿನಿಮಯ ಕೇಂದ್ರಗಳು ೨೫೦ ಪ್ರಾಥಮಿಕ ಶಾಲೆಗಳು ೪೦ ಪ್ರೌಢ ಶಾಲೆಗಳು ೧೦ ಪದವಿಪೂರ್ವ ಕಾಲೇಜುಗಳು ೨೦ ಗ್ರಂಥಾಲಯ ೧೫ ಖಾಸಗಿ ಆಸ್ಪತ್ರೆ ೧೦ ಪ್ರಾಥಮಿಕ ಆರೋಗ್ಯ ಕೇಂದ್ರಗಳು ೨೫ ಔಷಧಿ ಅಂಗಡಿಗಳು ೭೦ ಮಹಿಳಾ ಮಂಡಳಿಗಳು ೧೫೦ ಅಂಗನವಾಡಿ ಕೇಂದ್ರಗಳು ಇರುವುದು ಕಂಡು ಬರುತ್ತದೆ. ಅದೇ ರೀತಿಯಾಗಿ ಈ ತಾಲೂಕಿನಲ್ಲಿ ೬೦೭೪ ವೃದ್ಧಾಪ್ಯ ವೇತನ ಪಡೆಯುತ್ತಿರುವವರು ೫೦೦ ಮಾಶಾಸನ ಪಡೆಯುತ್ತಿರುವ ಅಂಗವಿಕಲರು ೨೦೦೦ ವಿಧವಾ ಪಿಂಚಣಿದಾರರರು ಸರ್ಕಾರದ ಸೌಲಭ್ಯವನ್ನು ಪಡೆಯುತ್ತಿರುವುದು ಕಂಡುಬರುತ್ತದೆ.

ಈ ತಾಲೂಕಿನಲ್ಲಿ ಪುರುಷ ಮತ್ತು ಮಹಿಳೆಯರ ಲಿಂಗಾನುಪಾತ ೧೧೨೪(೧೦೦೦ ಪುರುಷರಿಗೆ) ಇದ್ದು ಸಾಕ್ಷರತೆಯ ಪ್ರಮಾಣ ೮೧.೬೩ ಶೆಕಡಾ ಇರುತ್ತದೆ. ಇದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ೭೯.೮೩% ಸ್ತ್ರೀಯರ ಸಾಕ್ಷರತಾ ಪ್ರಮಾಣ ೬೯.೧೯% ಇರುತ್ತದೆ. ೨೦೧೧ ರ ಜನಗಣತಿಯ ಸಾಂದ್ರತೆ ಪ್ರತಿ ಚ.ಕಿ.ಮೀ. ಗೆ ೨೫೦ ಇರುತ್ತದೆ. ೨೩.೦೬ ಬೌಗೋಳಿಕ ಕ್ಷೇತ್ರವನ್ನು ಹೊಂದಿದ್ದು ಇದರಲ್ಲಿ ೨೫೫೨೬ಅರಣ್ಯ ಪ್ರದೇಶಗಳು ಹಾಗೂ ಸಮುದ್ರ ಪ್ರದೇಶವನ್ನು ಹೊಂದಿದೆ. ಒಟ್ಟು ಮನೆಗಳ ಸಂಖ್ಯೆ ೩೫,೯೭೭ಇದ್ದು ಇದರಲ್ಲಿ ಗ್ರಾಮೀಣ ಪ್ರದೇಶದಲ್ಲಿ ೨೫,೫೦೦ ಹಾಗೂ ನಗರ ಪ್ರದೇಶದಲ್ಲಿ ೯೭೯೭ ಮನೆಗಳು ಇರುವುದು ಕಂಡುಬರುತ್ತದೆ. ಕುಂದಾಪುರ ತಾಲೂಕಿನಲ್ಲಿರುವ ಗ್ರಾಮೀಣ ಪ್ರದೇಶಗಳು ಹೆಚ್ಚಿನ ಮಹತ್ವವನ್ನು ಪಡೆದಿದ್ದು ಹಲವಾರು ಕ್ಷೇತ್ರಗಳು ತಮ್ಮದೇಯಾದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಕುಂದಾಪುರ ತಾಲೂಕಿನಲ್ಲಿರುವ ಹಲವು ಹಳ್ಳಿಗಳನ್ನು ನನ್ನ ಸಂಶೋಧನೆಗೆ ಆಯ್ದುಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಅವುಗಳೆಂದರೆ ಕುಂದಾಪುರ ತಾಲೂಕಿನ ಹೊಂಬಾಡಿ-ಮಂಡಾಡಿ, ಯಡಾಡಿ-ಮತ್ಯಾಡಿ, ಜಪ್ತಿ, ಹಾರ್ದಳ್ಳಿ-ಮಂಡಳ್ಳಿ, ಹಳ್ನಾಡಿ-ಹರ್ಕಾಡಿ, ಗ್ರಾಮಗಳಾಗಿವೆ.

ಈ ಗ್ರಾಮಗಳ ಒಟ್ಟು ಮನೆಗಳ ಸಂಖ್ಯೆ, ಒಟ್ಟು ಜನಸಂಖ್ಯೆ, ಸಾಕ್ಷರತೆಯ ಪ್ರಮಾಣ, ಲಿಂಗಾನುಪಾತ, ಕೆಲಸ ನಿರ್ವಹಿಸುವವರ ಪ್ರಮಾಣ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆಗಳ ಬಗೆಗೆ ಈ ಮುಂದಿನ ಕೋಷ್ಟಕಗಳಲ್ಲಿ ಹೇಳಲಾಗಿದೆ.

**ಕೋಷ್ಟಕ ೨.೩ ಹೊಂಬಾಡಿ–ಮಂಡಾಡಿ, ಯಡಾಡಿ–ಮತ್ಯಾಡಿ, ಜಪ್ತಿ, ಹಾರ್ದಳ್ಳಿ–ಮಂಡಳ್ಳಿ, ಹಳ್ನಾಡಿ–ಹರ್ಕಾಡಿ ಈ ಗ್ರಾಮಗಳ ಮನೆಗಳ ಸಂಖ್ಯೆ, ಸಾಕ್ಷರತಾ ಪ್ರಮಾಣ, ಕೆಲಸ ನಿರ್ವಹಿಸುವವರ ಸಂಖ್ಯೆ, ಜನಸಂಖ್ಯೆಗಳ ಮಾಹಿತಿ**

| ಅಂಶಗಳು/ಗ್ರಾಮಗಳು | | ಹೊಂಬಾಡಿ–ಮಂಡಾಡಿ | ಯಡಾಡಿ–ಮತ್ಯಾಡಿ | ಜಪ್ತಿ | ಹಾರ್ದಳ್ಳಿ–ಮಂಡಳ್ಳಿ | ಹಳ್ನಾಡಿ–ಹರ್ಕಾಡಿ |
|---|---|---|---|---|---|---|
| ಒಟ್ಟು ಮನೆಗಳ ಸಂಖ್ಯೆ | | ೩೩೮ | ೫೩೪ | ೪೭೧ | ೬೬೯ | ೩೨೧ |
| ಜನಸಂಖ್ಯೆ | ಪುರುಷರು | ೭೪೫ | ೧೨೪೪ | ೧೦೧೮ | ೧೫೪೯ | ೭೪೧ |
| | ಸ್ತ್ರೀಯರು | ೮೨೫ | ೧೪೧೨ | ೧೧೬೦ | ೧೭೪೯ | ೮೬೫ |
| | ಒಟ್ಟು | ೧೫೭೦ | ೨೬೫೬ | ೨೧೭೮ | ೩೨೯೮ | ೧೬೦೬ |
| ಸಾಕ್ಷರತೆ ಪ್ರಮಾಣ | ಪುರುಷರು | ೮೩.೨೮% | ೮೯.೯೬% | ೮೪.೮೬% | ೮೨.೪೭% | ೮೫.೬೩% |
| | ಸ್ತ್ರೀಯರು | ೭೦.೭೯% | ೭೬.೨೨% | ೬೮.೮೪% | ೭೦.೫೮% | ೭೦.೪೬% |
| | ಒಟ್ಟು | ೭೫.೩೬% | ೮೨.೬೫% | ೭೬.೨೩% | ೭೬.೦೭% | ೭೭.೪೧% |
| ಕೆಲಸ ನಿರ್ವಹಿಸುವವರ ಪ್ರಮಾಣ | ಪುರುಷರು | ೪೩೨ | ೭೬೮ | ೬೧೮ | ೮೯೯ | ೪೪೬ |
| | ಸ್ತ್ರೀಯರು | ೩೧೪ | ೪೫೯ | ೨೭೭ | ೫೮೫ | ೨೫೪ |
| | ಒಟ್ಟು | ೭೪೬ | ೧೨೨೭ | ೮೯೫ | ೧೪೮೪ | ೭೦೦ |
| ಪರಿಶಿಷ್ಟ ಜಾತಿಯ ಸಂಖ್ಯೆ | ಪುರುಷರು | ೧೩೨ | ೭೨ | ೩೦ | ೧೧೬ | ೩೭ |
| | ಸ್ತ್ರೀಯರು | ೧೨೩ | ೭೭ | ೨೯ | ೧೦೪ | ೩೭ |
| | ಒಟ್ಟು | ೨೫೫ | ೧೪೯ | ೫೯ | ೨೨೦ | ೭೪ |
| ಪರಿಶಿಷ್ಟ ಪಂಗಡದ ಜನಸಂಖ್ಯೆ | ಪುರುಷರು | ೩೧ | ೭ | ೩ | ೩೭ | ೩೨ |
| | ಸ್ತ್ರೀಯರು | ೨೧ | ೯ | ೦ | ೩೩ | ೩೭ |
| | ಒಟ್ಟು | ೫೨ | ೧೬ | ೩ | ೭೦ | ೬೯ |
| ಲಿಂಗಾನುಪಾತ (೧೦೦೦ ಪುರುಷರಿಗೆ) | | ೧೧೦೭ | ೧೧೨೦ | ೮೮೦ | ೯೪೮ | ೯೪೮ |

ಮೂಲ: ೨೦೧೧ ಜನಗಣತಿ ತಾಲೂಕು ಜನಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ ಕುಂದಾಪುರ

ಕೋಷ್ಟಕದ ವಿವರಣೆಯು ಪ್ರಸ್ತುತ ಸಂಶೋಧನಾಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಗಳ ವಿವರಗಳ ಕುರಿತು ಮಾಹಿತಿ ತಿಳಿಸುತ್ತದೆ. ೨೦೧೧ರ ಜನಗಣತಿಯ ಆಧಾರದ ಮೇಲೆ ಹೊಂಬಾಡಿ–ಮಂಡಾಡಿ ಗ್ರಾಮವು ಕುಂದಾಪುರ ತಾಲೂಕಿನಿಂದ ೧೨ಕಿ.ಮಿ. ದೂರದಲ್ಲಿದ್ದು ಒಟ್ಟು ೧೫೭೦ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ೭೪೫ ಪುರುಷರು ೮೨೫ ಸ್ತ್ರೀಯರು ಇದ್ದಾರೆ. ಒಟ್ಟು ಮನೆಗಳ ಸಂಖ್ಯೆ ೩೩೮ ಇರುವುದು ಕಂಡು ಬರುತ್ತದೆ. ಸಾಕ್ಷರತೆಯ ಪ್ರಮಾಣವನ್ನು ನೋಡಲಾಗಿ ಶೇಕಡಾ ೮೩.೨೮ ರಷ್ಟು ಪುರುಷರು ಸಾಕ್ಷರತೆಯನ್ನು ಹೊಂದಿದ್ದಾರೆ. ಹಾಗೇ ೭೦.೭೯% ಸ್ತ್ರೀಯರು ಸಾಕ್ಷರರಾಗಿದ್ದಾರೆ. ಇದನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀಯರ ಶಿಕ್ಷಣ ಆದ್ಯತೆ ಕಡಿಮೆಯಿರುವುದು ಕಂಡುಬರುತ್ತದೆ. ಹಾಗೂ ಗ್ರಾಮದಲ್ಲಿ ಕೆಲಸ ನಿರ್ವಹಿಸುವವರನ್ನು ನೋಡಿದಾಗ ೪೩೨ ಪುರುಷರು ಹಾಗೂ ೩೧೪ ಸ್ತ್ರೀಯರು ಕೆಲಸ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಲಿಂಗಾನುಪಾತವು ೧೧೦೭ ಮಹಿಳೆಯರು (೧೦೦೦ ಪುರುಷರು) ಅದೇ ರೀತಿಯಾಗಿ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ಒಟ್ಟು ೨೫೫ ಜನರಿದ್ದು ಇಲ್ಲಿ ಪರಿಶಿಷ್ಟ ಪಂಗಡದ ಜನರು ೫೨ ಇರುವುದು ಕಂಡುಬರುತ್ತದೆ.

ಯಡಾಡಿ–ಮತ್ಯಾಡಿ ಗ್ರಾಮವು ಕುಂದಾಪುರ ತಾಲೂಕಿನಿಂದ ೧೬ಕಿ.ಮಿ. ದೂರದಲ್ಲಿದ್ದು ಒಟ್ಟು ೨೬೫೬ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ೧೨೪೪ ಪುರುಷರು ೧೪೧೨ ಸ್ತ್ರೀಯರು ಇದ್ದಾರೆ. ಒಟ್ಟು ಮನೆಗಳ ಸಂಖ್ಯೆ ೫೩೪ ಇರುವುದು ಕಂಡು ಬರುತ್ತದೆ. ಸಾಕ್ಷರತೆಯ ಪ್ರಮಾಣವನ್ನು ನೋಡಲಾಗಿ ಶೇಕಡಾ ೮೯.೯೬ ರಷ್ಟು ಪುರುಷರು ಸಾಕ್ಷರತೆಯನ್ನು ಹೊಂದಿದ್ದಾರೆ. ಹಾಗೇ ೭೬.೨೨% ಸ್ತ್ರೀಯರು ಸಾಕ್ಷರರಾಗಿದ್ದಾರೆ. ಇದನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀಯರ ಶಿಕ್ಷಣ ಆದ್ಯತೆ ಕಡಿಮೆಯಿರುವುದು ಕಂಡುಬರುತ್ತದೆ. ಹಾಗೂ ಗ್ರಾಮದಲ್ಲಿ ಕೆಲಸ ನಿರ್ವಹಿಸುವವರನ್ನು ನೋಡಿದಾಗ ೭೬೮ ಪುರುಷರು ಹಾಗೂ ೪೫೦ ಸ್ತ್ರೀಯರು ಕೆಲಸ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಲಿಂಗಾನುಪಾತವು ೧೧೦೦ ಮಹಿಳೆಯರು (೧೦೦೦ ಪುರುಷರು) ಅದೇ ರೀತಿಯಾಗಿ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ಒಟ್ಟು ೧೪೯ ಜನರಿದ್ದು ಇಲ್ಲಿ ಪರಿಶಿಷ್ಟ ಪಂಗಡದ ಜನರು ೧೬ ಇರುವುದು ಕಂಡುಬರುತ್ತದೆ.

ಜಪ್ತಿ ಗ್ರಾಮವು ಕುಂದಾಪುರ ತಾಲೂಕಿನಿಂದ ೧೦ಕಿ.ಮಿ. ದೂರದಲ್ಲಿದ್ದು ಒಟ್ಟು ೨೧೭೮ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ೧೦೧೮ ಪುರುಷರು ೧೧೬೦ ಸ್ತ್ರೀಯರು ಇದ್ದಾರೆ. ಒಟ್ಟು ಮನೆಗಳ ಸಂಖ್ಯೆ ೪೭೧ ಇರುವುದು ಕಂಡು ಬರುತ್ತದೆ. ಸಾಕ್ಷರತೆಯ ಪ್ರಮಾಣವನ್ನು ನೋಡಲಾಗಿ ಶೇಕಡಾ ೮೪.೮೬ ರಷ್ಟು ಪುರುಷರು ಸಾಕ್ಷರತೆಯನ್ನು ಹೊಂದಿದ್ದಾರೆ. ಹಾಗೇ ೬೮.೮೪% ಸ್ತ್ರೀಯರು ಸಾಕ್ಷರರಾಗಿದ್ದಾರೆ. ಇದನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀಯರ ಶಿಕ್ಷಣ ಆದ್ಯತೆ ಕಡಿಮೆಯಿರುವುದು ಕಂಡುಬರುತ್ತದೆ. ಹಾಗೂ ಗ್ರಾಮದಲ್ಲಿ ಕೆಲಸ ನಿರ್ವಹಿಸುವವರನ್ನು ನೋಡಿದಾಗ ೬೧೮ ಪುರುಷರು ಹಾಗೂ ೨೭೭ ಸ್ತ್ರೀಯರು ಕೆಲಸ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಲಿಂಗಾನುಪಾತವು ೮೮೦ ಮಹಿಳೆಯರು (೧೦೦೦ ಪುರುಷರು) ಅದೇ ರೀತಿಯಾಗಿ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ಒಟ್ಟು ೫೯ ಜನರಿದ್ದು ಇಲ್ಲಿ ಪರಿಶಿಷ್ಟ ಪಂಗಡದ ಜನರು ೩ ಇರುವುದು ಕಂಡುಬರುತ್ತದೆ.

ಹಾರ್ದಳ್ಳಿ-ಮಂಡಳ್ಳಿ ಗ್ರಾಮವು ಕುಂದಾಪುರ ತಾಲೂಕಿನಿಂದ ೧೮ಕಿ.ಮಿ. ದೂರದಲ್ಲಿದ್ದು ಒಟ್ಟು ೩೨೯೮ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ೧೫೪೯ ಪುರುಷರು ೧೭೪೯ ಸ್ತ್ರೀಯರು ಇದ್ದಾರೆ. ಒಟ್ಟು ಮನೆಗಳ ಸಂಖ್ಯೆ ೬೬೯ ಇರುವುದು ಕಂಡು ಬರುತ್ತದೆ. ಸಾಕ್ಷರತೆಯ ಪ್ರಮಾಣವನ್ನು ನೋಡಲಾಗಿ ಶೇಕಡಾ ೮೨.೪೭ ರಷ್ಟು ಪುರುಷರು ಸಾಕ್ಷರತೆಯನ್ನು ಹೊಂದಿದ್ದಾರೆ. ಹಾಗೇ ೭೦.೫೮% ಸ್ತ್ರೀಯರು ಸಾಕ್ಷರರಾಗಿದ್ದಾರೆ. ಇದನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀಯರ ಶಿಕ್ಷಣ ಆದ್ಯತೆ ಕಡಿಮೆಯಿರುವುದು ಕಂಡುಬರುತ್ತದೆ. ಹಾಗೂ ಗ್ರಾಮದಲ್ಲಿ ಕೆಲಸ ನಿರ್ವಹಿಸುವವರನ್ನು ನೋಡಿದಾಗ ೮೯ ಪುರುಷರು ಹಾಗೂ ೫೮೫ ಸ್ತ್ರೀಯರು ಕೆಲಸ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಲಿಂಗಾನುಪಾತವು ೯೪೮ ಮಹಿಳೆಯರು (೧೦೦೦ ಪುರುಷರು) ಅದೇ ರೀತಿಯಾಗಿ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ಒಟ್ಟು ೨೨೦ ಜನರಿದ್ದು ಇಲ್ಲಿ ಪರಿಶಿಷ್ಟ ಪಂಗಡದ ಜನರು ೭೦ ಇರುವುದು ಕಂಡುಬರುತ್ತದೆ.

ಹಳ್ನಾಡಿ-ಹರ್ಕಾಡಿ ಗ್ರಾಮವು ಕುಂದಾಪುರ ತಾಲೂಕಿನಿಂದ ೨೨ಕಿ.ಮಿ. ದೂರದಲ್ಲಿದ್ದು ಒಟ್ಟು ೧೬೦೬ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ೭೪೧ ಪುರುಷರು ೮೬೪ ಸ್ತ್ರೀಯರು ಇದ್ದಾರೆ. ಒಟ್ಟು ಮನೆಗಳ ಸಂಖ್ಯೆ ೩೨೧ ಇರುವುದು ಕಂಡು ಬರುತ್ತದೆ. ಸಾಕ್ಷರತೆಯ ಪ್ರಮಾಣವನ್ನು ನೋಡಲಾಗಿ ಶೇಕಡಾ ೮೫.೬೩ ರಷ್ಟು ಪುರುಷರು ಸಾಕ್ಷರತೆಯನ್ನು ಹೊಂದಿದ್ದಾರೆ. ಹಾಗೇ ೭೦.೪೬% ಸ್ತ್ರೀಯರು ಸಾಕ್ಷರರಾಗಿದ್ದಾರೆ. ಇದನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀಯರ ಶಿಕ್ಷಣ ಆದ್ಯತೆ ಕಡಿಮೆಯಿರುವುದು ಕಂಡುಬರುತ್ತದೆ. ಹಾಗೂ ಗ್ರಾಮದಲ್ಲಿ ಕೆಲಸ ನಿರ್ವಹಿಸುವವರನ್ನು ನೋಡಿದಾಗ ೪೪೬ ಪುರುಷರು ಹಾಗೂ ೨೫೪ ಸ್ತ್ರೀಯರು ಕೆಲಸ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಲಿಂಗಾನುಪಾತವು ೯೪೮ ಮಹಿಳೆಯರು (೧೦೦೦ ಪುರುಷರು) ಅದೇ ರೀತಿಯಾಗಿ ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆ ಒಟ್ಟು ೭೭ ಜನರಿದ್ದು ಇಲ್ಲಿ ಪರಿಶಿಷ್ಟ ಪಂಗಡದ ಜನರು ೬೯ ಇರುವುದು ಕಂಡುಬರುತ್ತದೆ.

ಈ ರೀತಿಯಾಗಿ ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಗಳ ಸವಿಸ್ತಾರವಾದ ಮಾಹಿತಿಯನ್ನು ನೋಡಬಹುದಾಗಿದೆ.

## ಉಲ್ಲೇಖಗಳು:


- ಕರ್ನಾಟಕ ಸರಕಾರ ಉಡುಪಿ ಜಿಲ್ಲೆಯ ಅಂಕಿ – ಅಂಶಗಳ ನೋಟ ೨೦೧೦-೧೧ ಜಿಲ್ಲಾ ಸಂಗ್ರಹಣಾಧಿಕಾರಿ ಉಡುಪಿ.
- ಕರ್ನಾಟಕ ಸರಕಾರ ಕುಂದಾಪುರ ತಾಲೂಕು ಅಂಕಿ – ಅಂಶಗಳ ನೋಟ ೨೦೧೦-೧೧ ತಾಲೂಕು ಕಛೇರಿ ಕುಂದಾಪುರ
- ಕರ್ನಾಟಕ ವಿಕಿಪೀಡಿಯ
- ಉಡುಪಿ ವಿಕಿಪೀಡಿಯ
- ಕುಂದಾಪುರ ವಿಕಿಪೀಡಿಯ

## ಅಧ್ಯಾಯ-೩

# ಕ್ಷೇತ್ರ ಕಾರ್ಯಾಧಾರಿತ ಮಾಹಿತಿ ವಿಶ್ಲೇಷಣೆ

### ೩.೧. ಮಾಹಿತಿದಾರರ ಕೌಟುಂಬಿಕ, ಸಾಮಾಜಿಕ ಹಿನ್ನೆಲೆ

ಪ್ರಸ್ತುತ ಮೂರನೇ ಅಧ್ಯಾಯದಲ್ಲಿ ಗ್ರಾಮೀಣ ಕೃಷಿಕರ ಕೌಟುಂಬಿಕ ಮತ್ತು ಸಾಮಾಜಿಕ ಹಿನ್ನೆಲೆ ಕುರಿತು ಅದ್ಯಾಯವನ್ನು ಮಡಲಾಗಿದೆ. ನಾವು ಯಾವುದೇ ಅದ್ಯಯನ ಕೈಗೊಂಡಾಗ ಆ ವಿಷಯದ ಸತ್ಯಾಸತ್ಯತೆಯನ್ನು ಅರಿಯಲು ಮತ್ತು ಆ ವ್ಯಕ್ತಿಯ ಮತ್ತು ಸಮುದಾಯದ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಕೌಟುಂಬಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವುದು ಅತ್ಯವಶ್ಯಕವಾಗಿರುತ್ತದೆ. ಆಗ ಮಾತ್ರ ಆ ವಿಷಯದ ಬಗ್ಗೆ ಸಂಪೂರ್ಣ ಮಾಹಿತಿ ಲಭ್ಯವಾಗಲು ಸಾಧ್ಯವಾಗುತ್ತದೆ.

ಪ್ರಸ್ತುತ ನನ್ನ ಈ ಅಧ್ಯಯನದಲ್ಲಿ ಬದಲಾಗುತ್ತಿರುವ ಕೃಷಿ ಆರ್ಥಿಕತೆ : ಕುಂದಾಪು ತಾಲೂಕಿನ ಒಂದು ಅಧ್ಯಯನ ಎಂಬ ವಿಷಯದ ಕುರಿತು ಇದ್ದು ಕೃಷಿಕರ ವಾಸ್ತವ ಸ್ಥಿತಿಯನ್ನು ಅರಿಯಲು ಗ್ರಾಮಗಳಿಗೆ ಬೇಟಿ ಕೊಟ್ಟಾಗ ಅವರ ಕೌಟುಂಬಿಕ ಮತ್ತು ಸಾಮಾಜಿಕ ಸ್ಥಿತಿ ತಿಳಿದು ಬರುತ್ತದೆ. ಕೃಷಿಯ ಬಗ್ಗೆ ಅವರಿಗೆ ಇರುವ ಜ್ಞಾನ, ಅವರ ಉದ್ಯೋಗ ಅವರಿಗಿರುವ ಶಿಕ್ಷಣ ಸೌಲಭ್ಯಗಳು ತಿಳಿದು ಬರುತ್ತದೆ. ಗ್ರಾಮಗಳಲ್ಲಿ ಮೂಲ ಉದ್ಯೋಗ ಕೃಷಿಯಾದ್ದರಿಂದ ಕುಟುಂಬದ ಸದಸ್ಯರೆಲ್ಲರೂ ಅಧಿಕವಾಗಿ ಅದನ್ನೆ ಅವಲಂಬಿಸಿರುತ್ತಾರೆ ಭೂರಹಿತ ಕೃಷಿ ಕಾರ್ಮಿಕರು ಮೊದಲೇ ತಿಳಿದಂತೆ ಬಡತನದಲ್ಲಿ ಬಳಲುತ್ತಿರುವುದರಿಂದ ಅವರು ಹೇಗೆ ಎಷ್ಟು ಕಡಿಮೆ ಕೂಲಿ ಬಂದರೂ ಅದೇ ಕೆಲಸದಲ್ಲಿ ಮುಂದುವರೆದು ಜೀವನ ಸಾಗಿಸುತ್ತಾರೆ. ನಾನು ಅಧ್ಯಯನ ಮಾಡಿದಂತೆ ಗ್ರಾಮೀಣ ಜನರಲ್ಲಿ ಒಂದು ಮುಗ್ದತೆಯ ಸ್ವಭಾವವಿರುತ್ತದೆ. ಎಂದರೆ ನಾವು ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ ಎಂಬ ಪರಿಜ್ಞಾನವು ಅವರಲ್ಲಿ ಇರುವುದಿಲ್ಲ. ಅವರಿಗೆ ಸಾಮಾನ್ಯ ರೋಗ ರುಜಿನಗಳು ಬಂದರೂ ಅವುಗಳನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ.

ಅಧ್ಯಯನದಿಂದ ತಿಳಿದು ಬಂದಂತೆ ೭೦ ಪ್ರತಿಶತದಷ್ಟು ಕೃಷಿಕರು ಕೇವಲ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಪಡೆದಿರುತ್ತಾರೆ. ೩೦% ಕೃಷಿಕರು ಅನಕ್ಷರಸ್ಥರಾಗಿರುವುದು ತಿಳಿದುಬರುತ್ತದೆ. ಗ್ರಾಮೀಣ ಕೃಷಿಕರು ಹೆಚ್ಚು ಅಜ್ಞಾನದಲ್ಲಿರುವುದು ಕಂಡು ಬರುತ್ತದೆ. ತಮ್ಮ ಪೂರ್ವಜರು ಬೆಳೆದು ಬಂದ ರೀತಿಯಲ್ಲಿಯೇ ಇಡೀ ಕುಟುಂಬದ ಜನರು ತಮ್ಮ ತಮ್ಮ ಮಕ್ಕಳನ್ನು ಬೆಳೆಸುತ್ತಾರೆ.

ಗ್ರಾಮೀಣ ಪ್ರದೇಶದ ಕೃಷಿಕರು ಹೆಚ್ಚಾಗಿ ಹಿಂದೂಗಳು ಇರುವ ಪ್ರದೇಶವಾಗಿದ್ದು, ಇದರಲ್ಲಿ ಬಡತನದಲ್ಲಿರುವ ಕುಟುಂಬಗಳು ಅಧಿಕವಿರುವುದು ತಿಳಿದುಬರುತ್ತದೆ. ೭೦.೦೫%ಷ್ಟು ಬಿ.ಪಿ.ಎಲ್ ಪಡಿತರ ಚೀಟಿಯನ್ನು ಹೊಂದಿದವರಾಗಿದ್ದಾರೆ.

ಗ್ರಾಮೀಣ ಪ್ರದೇಶದಲ್ಲಿ ಅಧಿಕವಾಗಿ ಬಡ ಜನರೇ ಇರುತ್ತಾರೆ. ಊರಲ್ಲಿ ಕೆಲವು ಶ್ರೀಮಂತ ವರ್ಗದವರು ಕಂಡುಬರುತ್ತಾರೆ ಕೃಷಿ ಕೆಲಸಗಳಿಗೆ ಹೋಗಿ ಬರುವುದು ಸಹಜವಾಗಿ ಇರುತ್ತದೆ. ಕೂಲಿ ಕೆಲಸಕ್ಕೆ ಹೋದರೆ ಮರಳಿ ಬರುವುದು ಸಾಯಂಕಾಲವೇ ಹೀಗಿರುವಾಗ ತಾವು ಶಿಕ್ಷಣ ಕಲಿಯುವುದು ಆಚೆಗಿರಲಿ ಮಕ್ಕಳನ್ನು ಶಾಲೆ ಕಡೆಗೆ ಕಳುಹಿಸದಿರುವುದು ಕಂಡುಬರುತ್ತದೆ. ಗ್ರಾಮೀಣ ಕೃಷಿ ಕೂಲಿ ಕಾರ್ಮಿಕರು ತಮ್ಮ ದಿನನಿತ್ಯದ ಜೀವನ ಸಾಗಿಸುವುದೇ ದುಸ್ತರವಾಗುತ್ತಿದೆ. ಕೌಟುಂಬಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿರುವುದರಿಂದ ಅವರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀಳುವುದನ್ನು ಕಾಣಬಹುದು. ಸರಕಾರದ ಸೌಲಭ್ಯಗಳು ಎಷ್ಟಿದ್ದರೂ ಅವುಗಳನ್ನು ಪಡೆದುಕೊಳ್ಳುವಲ್ಲಿ ಸಾಕಷ್ಟು ಕೃಷಿಕರಿಗೆ ಸಾಧ್ಯವಾಗದೇ ಇರುವುದನ್ನು ಕಾಣಬಹುದು. ಗ್ರಾಮೀಣ ಕೃಷಿಕರ ಕೌಟುಂಬಿಕ ಸಾಮಾಜಿಕ ಸ್ಥಿತಿ ಮತ್ತು ಅವರ ಹಿನ್ನೆಲೆಯನ್ನು ಅರಿಯಲು ಸಂಶೋಧಕನಾದ ನಾನು ಅಧ್ಯಯನವನ್ನು ಕೈಗೊಂಡಾಗ ಅದರ ಅಂಕೆ ಸಂಖ್ಯೆಗಳ ಕೋಷ್ಟಕಗಳು ಈ ಕೆಳಗಿನಂತಿರುವುದು ಕಂಡುಬರುತ್ತದೆ.

**ಕೋಷ್ಟಕ ೩.೧ ಮಾಹಿತಿದಾರರ ವಯಸ್ಸು**

| ಕ್ರ.ಸಂ. | ವಯಸ್ಸು | ಸಂಖ್ಯೆ | ಶೇಕಡಾ |
|---|---|---|---|
| ೧ | ೧೮ ರಿಂದ ೨೯ | ೧೦ | ೧೦ |
| ೨ | ೨೯ ರಿಂದ ೩೮ | ೨೦ | ೨೦ |
| ೩ | ೩೯ ರಿಂದ ೪೫ | ೫೦ | ೫೦ |
| ೪ | ೬೦ ಕ್ಕಿಂತ ಹೆಚ್ಚು | ೨೦ | ೨೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೧ ಮಾಹಿತಿದಾರರ ವಯಸ್ಸನ್ನು ತಿಳಿಸುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿಕರು ಹೆಚ್ಚಾಗಿ ಇರುವುದರಿಂದ ಹೆಚ್ಚಿನ ಕೃಷಿಕರು ಅನಕ್ಷರಸ್ಥರೇ ಇರುವುದರಿಂದ ನಿರ್ದಿಷ್ಟವಾದ ವಯೋಮಾನ ತಿಳಿಯುವುದು ಕಷ್ಟ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಓದಿದ ಕೃಷಿಕರು ಮಾಹಿತಿದಾರರಾದರೇ ತಿಳಿಯುವುದು ಕಷ್ಟವಾಗಲಾರದು ಮೇಲಿನ ಕೋಷ್ಟಕದಲ್ಲಿ ೧೮ ರಿಂದ ೨೯ ವಯೋಮಾನದ ಕೃಷಿಕರು ೧೦% ರಷ್ಟಿದ್ದರೆ. ೨೯ ರಿಂದ ೩೮ ವಯೋಮಾನದ ಕೃಷಿಕರು ೨೦%, ೩೯ ರಿಂದ ೪೫ ವಯೋಮಾನದ ಕೃಷಿಕರು ಅಧಿಕ (೫೦%) ಇದ್ದಾರೆ. ಹಾಗೇ ೬೦ಕ್ಕಿಂತ ಹೆಚ್ಚು ವಯೋಮಾನದ ಕೃಷಿಕರು ೨೦% ಇರುವುದು ಕಂಡು ಬರುತ್ತದೆ.

**ನಕ್ಷೆ : ೩.೧**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೊಷ್ಟಕ ೩.೨: ಮಾಹಿತಿದಾರರ ಶಿಕ್ಷಣ**

| ಕ್ರಸಂ | ಶಿಕ್ಷಣ ಮಟ್ಟ | ಸಂಖ್ಯೆ | ಶೇಕಡಾ |
|---|---|---|---|
| ೧ | ಅನಕ್ಷರಸ್ಥರು | ೧೦ | ೧೦ |
| ೨ | ಪ್ರಾಥಮಿಕ | ೭೦ | ೭೦ |
| ೩ | ಪ್ರೌಢಶಲೆ | ೧೦ | ೧೦ |
| ೪ | ಪದವಿಪೂರ್ವ | ೫ | ೫ |
| ೫ | ಪದವಿ ಅಥವಾ ಮೇಲ್ಪಟ್ಟು | ೫ | ೫ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಶಿಕ್ಷಣವು ಪ್ರಗತಿಯ ಸಂಕೇತವಾಗಿದೆ ಆದರೆ ಗ್ರಾಮೀಣ ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣದಿಂದ ವಂಚಿತರಾಗಿರುವವರೇ ಹೆಚ್ಚಾಗಿರುತ್ತಾರೆ. ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಇಲ್ಲಿಯೂ ಅನಕ್ಷರಸ್ಥರ ಪ್ರಮಾಣಕ್ಕೇನು ಕೊರತೆ ಇಲ್ಲ. ೧೦% ಅನಕ್ಷರಸ್ಥರಿದ್ದರೆ ೭೦% ಕೃಷಿಕರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ೧೦% ಪ್ರೌಢ ಶಿಕ್ಷಣ ೫% ಪದವಿಪೂರ್ವ ಶಿಕ್ಷಣ ೫% ಪದವಿ ಅಥವ ಮೇಲ್ಪಟ್ಟ ಶಿಕ್ಷಣವನ್ನು ಕೃಷಿಕರು ಪಡೆದಿದ್ದಾರೆ. ಎರಡು–ಮೂರು ಗ್ರಾಮಗಳನ್ನು ಸೇರಿಸಿಕೊಂಡು ಒಂದು ಪ್ರೌಢ ಶಲೆ ೪–೫ ಗ್ರಾಮಗಳು ಸೇರಿಕೊಂಡು ಒಂದು ಪದವಿಪೂರ್ವ ಕಾಲೇಜು ಬರುವಂತೆ ಸರಕಾರ ಶಾಲೆಗಳನ್ನು ತೆರೆದಿದ್ದರೂ ಪ್ರೌಢ ಶಿಕ್ಷಣವನ್ನು ಕೇವಲ ೧೦% ಮಾತ್ರ ಅಧ್ಯಯನ ಮಾಡಿದವರಾಗಿದ್ದಾರೆ. ಅಂದರೆ ಈಗಲೂ ಗ್ರಾಮೀಣ ಕೃಷಿಕರು ಶಿಕ್ಷಣದಲ್ಲಿ ಆಸಕ್ತಿ ತೋರದಿರುವುದನ್ನು ಈ ಅಂಕಿ ಅಂಶಗಳು ಸೂಚಿಸುತ್ತವೆ.

**ನಕ್ಷೆ: ೩.೨**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೊಷ್ಟಕ ೩.೩ ಮಾಹಿತಿದಾರರ ಧರ್ಮ**

| ಕ್ರ.ಸಂ. | ಧರ್ಮ | ಸಂಖ್ಯೆ | ಶೇಕಡಾ |
|---|---|---|---|
| ೧ | ಹಿಂದೂ | ೯೫ | ೯೫ |
| ೨ | ಮುಸ್ಲಿಂ | ೫ | ೫ |
| ೩ | ಕ್ರಿಶ್ಚಿಯನ್ | ೦ | ೦ |
| ೪ | ಇತರರು | ೦ | ೦ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೊಷ್ಟಕ ಸಂಖ್ಯೆ ೩.೩ರಲ್ಲಿ ಮಾಹಿತಿದಾರರ ಧರ್ಮವನ್ನು ಸೂಚಿಸುತ್ತದೆ. ಭಾರತದಲ್ಲಿ ಧರ್ಮವು ಹಾಸು ಹೊಕ್ಕಾದ ಪ್ರಕ್ರಿಯರಯಾಗಿದ್ದು ಅದಕ್ಕೆ ಗ್ರಾಮವು ಹೊರತಾಗಿಲ್ಲ, ಆಯಾ ಸಂಘಟಿತ ಧರ್ಮಗಳು ತಮ್ಮದೇ ಆದ ಸಂಪ್ರದಾಯಗಳನ್ನು ಆಚರಿಸುತ್ತಲೇ ಬಂದಿದೆ. ಕೆಲವು ಮೂಲಭೂತವಾಗಿ ಸಂಘಟಿತ ಧರ್ಮಗಳು ಇದನ್ನು ದಿನನಿತ್ಯದ ಆಹಾರ, ಭಾಷೆ ಉದ್ಯೋಗ ಹಬ್ಬ-ಹರಿದಿನಗಳಲ್ಲೂ ತಮ್ಮ ಮೂಲಭೂತವಾದುದನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಈ ಪ್ರಸ್ತುತ ಅಧ್ಯಯನದಲ್ಲಿ ಗ್ರಾಮೀಣ ಕೃಷಿಕರು ಯಾವ ಸಂಘಟಿತ ಧರ್ಮದವರು ಎಷ್ಟು ಕೃಷಿಕರು ಇದ್ದಾರೆ ಎಂಬುವುದನ್ನು ಸೂಚಿಸುತ್ತದೆ. ೯೫% ಹಿಂದೂ ಕೃಷಿಕರು, ೫% ಮುಸ್ಲಿಂ ಕೃಷಿಕರು ಇದ್ದಾರೆ. ಇನ್ನು ಉಳಿದಂತೆ ಮುಸ್ಲಿಂ, ಕ್ರಿಶ್ಚಿಯನ್ ಮತ್ತು ಇತರರು ಇಷ್ಟು ಕಂಡುಬರುವುದಿಲ್ಲ ಒಟ್ಟಿನಲ್ಲಿ ಹಿಂದೂ ಕೃಷಿಕರು ಅಧಿಕವಾಗಿರುವುದು ಕಂಡುಬರುತ್ತದೆ.

**ನಕ್ಷೆ : ೩.೩**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ ೩.೪ ಮಾಹಿತಿದಾರರ ಜಾತಿ**

| ಕ್ರ.ಸಂ. | ಜಾತಿಗಳು | ಸಂಖ್ಯೆ | ಶೇಕಡಾ |
|---|---|---|---|
| ೧ | ಸಾಮಾನ್ಯ ವರ್ಗ | ೫ | ೫ |
| ೨ | ಪರಿಶಿಷ್ಟ ಜಾತಿ | ೫ | ೫ |
| ೩ | ಪರಿಶಿಷ್ಟ ಪಂಗಡ | ೩ | ೩ |
| ೪ | ಹಿಂದುಳಿದ ವರ್ಗ | ೮೭ | ೮೭ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಕೋಷ್ಟಕ ಸಂಖ್ಯೆ ೩.೪ ರಲ್ಲಿ ಮಾಹಿತಿದಾರರ ಜಾತಿಯ ಅಂಕಿ-ಅಂಶಗಳನ್ನು ಸೂಚಿಸುತ್ತದೆ. ಭಾರತೀಯ ಸಮಾಜದ ಜನಸಂಶ್ಯೆಯಲ್ಲಿ ಸಾಮಾಜಿಕ ಸ್ಥರ ವಿನ್ಯಾಸವು ಹಾಸುಹೊಕ್ಕಾದ ಪ್ರಕ್ರಿಯೆಯಾಗಿದ್ದು. ಸಮಾಜದಲ್ಲಿ ಮೇಲು ಕೀಳು ಬಡವ-ಶ್ರೀಮಂತ, ಪ್ರಬಲ-ಬಲಹೀನ ಪವಿತ್ರ-ಅಪವಿತ್ರ ಎಂಬ ಸಂಪ್ರದಾಯಗಳನ್ನು ಬಳಸಿಕೊಂಡು ಬಂದಿರುವುದಲ್ಲದೇ ಸಮಾಜದಲ್ಲಿ ಹಲವಾರು ಏರು-ಪೇರುಗಳಿಗೆ ಈ ಜಾತಿ ಶ್ರೇಣಿಯು ಕಾರಣವಾಗುವುದರಲ್ಲಿ ಸಂದೇಹವೇ ಇರಲಾರದು. ಪ್ರಸ್ತುತ ಅಧ್ಯಯನದಲ್ಲಿ ಕೋಷ್ಟಕದ ಅಂಕಿ-ಅಂಶಗಳಂತೆ ಮಾಹಿತಿದಾರರು ಯಾವ ಜಾತಿಗಳಲ್ಲಿ ಎಷ್ಟು ಜನರಿರುವರು ಎಂಬುದು ತಿಳಿದು ಬರುತ್ತದೆ. ೫% ಸಾಮಾನ್ಯ ವರ್ಗದವರು ಎಂದರೆ ಬ್ರಾಹ್ಮಣ ವರ್ಗದವರು, ೫% ಪರಿಶಿಷ್ಟ ಜಾತಿ, ೩% ಪರಿಶಿಷ್ಟ ಪಂಗಡದವರಿದ್ದಾರೆ. ೮೭% ಹಿಂದುಳಿದ ವರ್ಗಕ್ಕೆ ಸೇರಿದ ಜನರಿದ್ದಾರೆ. ಕೋಷ್ಟಕವನ್ನು ಗಮನಿಸಿದಾಗ ಹಿಂದುಳಿದ ವರ್ಗ (ಸಮುದಾಯಕ್ಕೆ) ಸೇರಿದ ಜನರು ಅಧಿಕವಾಗಿರುವುದು ಸ್ಪಷ್ಟವಾಗುತ್ತದೆ. ಗ್ರಾಮೀಣ ಕೃಷಿಕರಲ್ಲಿ ಸಂಶೋಧನೆಯಲ್ಲಿ ಕೈಗೊಂಡ ಅಧ್ಯಯನದ ಪ್ರಕಾರ ಸ್ಪಷ್ಟವಾಗಿ ಹಿಂದುಳಿದ ಸಮುದಾಯದ ಪ್ರಮಾಣವೇ ಅಧಿಕವಾಗಿರುತ್ತದೆ.

**ಕೋಷ್ಟಕ ೩.೫ ಮಾಹಿತಿದಾರರ ಭಾಷೆಗಳು:**

| ಕ್ರ.ಸಂ. | ಭಾಷೆಗಳು | ಸಂಖ್ಯೆ | ಶೇಕಡಾ |
|---|---|---|---|
| ೧ | ಕನ್ನಡ | ೯೮ | ೯೮ |
| ೨ | ಇಂಗ್ಲೀಷ್ | ೦ | ೦ |
| ೩ | ಹಿಂದಿ | ೦ | ೦ |
| ೪ | ಇತರೆ (ಉರ್ದು) | ೨ | ೨ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೫ರಲ್ಲಿ ಮಾಹಿತಿದಾರರ ಭಾಷೆಯ ಬಗೆಗೆ ಅಂಕಿ–ಅಂಶಗಳನ್ನು ಸೂಚಿಸುತ್ತದೆ. ಭಾರತವು ಅನೇಕ ಭಾಷೆ ಅನೇಕ ಸಂಸ್ಕೃತಿ ಅನೇಕ ವೇಷ–ಭೂಷಣ ಅನೇಕ ಜಾತಿ–ಮತಗಳಿಂದ ಕೂಡಿದ ದೇಶವಾಗಿದೆ. ಆದ್ದರಿಂದ ಆಂಗ್ಲ ಚಿಂತಕರು ಭಾರತವನ್ನು ಒಂದು ಚಿಕ್ಕ ಪ್ರಪಂಚವೆಂದು ಕರೆದಿದ್ದಾರೆ. ಅಂದರೆ ನಮ್ಮ ದೇಶದಲ್ಲಿ ಎಲ್ಲಾ ರೀತಿಯ ಜನಾಂಗವನ್ನು ಕಾಣಬಹುದು. ಹಾಗೇ ಸಂಶೋಧಕರು ಕೈಗೊಂಡ ಅಧ್ಯಯನ ಕ್ಷೇತ್ರದಲ್ಲಿಯೂ ಕನ್ನಡ ಉರ್ದು ಹಾಗೂ ಇತರೆ ಭಾಷೆಗಳನ್ನಾಡುವ ಜನರನ್ನು ಕಾಣಬಹುದಾಗಿದೆ. ಆದರೆ ಕೆಲವೊಂದು ಗ್ರಾಮೀಣ ಪ್ರದೇಶಗಳಲ್ಲಿ ಕೇವಲ ಕನ್ನಡ ಮತ್ತು ಉರ್ದು ಭಾಷೆಗಳನ್ನು ಮಾತನಾಡುವ ಜನರನ್ನು ಕಾನಬಹುದಾಗಿದೆ. ಕೃಷಿಕರು ೯೮% ಕನ್ನಡ, ೨% ಹಿಂದಿ ಮತ್ತು ಉರ್ದು ಭಾಷೆಯನ್ನು ಮಾತನಾಡುವವರಿದ್ದಾರೆ. ಸಾಮಾನ್ಯವಾಗಿ ಕನ್ನಡ ಬಲ್ಲವರೇ ಹೆಚ್ಚಾಗಿ ಇರುವುದು ಕಂಡುಬರುತ್ತದೆ.

**ಕೋಷ್ಟಕ ೩.೬ ಮಾಹಿತಿದಾರರ ವೈವಾಹಿಕ ಸ್ಥಿತಿಗತಿ**

| ಕ್ರ.ಸಂ. | ವೈವಾಹಿಕ ಸ್ಥಿತಿ | ಸಂಖ್ಯೆ | ಶೇಕಡಾ |
|---|---|---|---|
| ೧ | ವಿವಾಹಿತರು | ೯೦ | ೯೦ |
| ೨ | ವಿಧವೆ | ೧೦ | ೧೦ |
| ೩ | ವಿಚ್ಛೇದಿತ | ೦ | ೦ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಕೋಷ್ಟಕ ೩.೬ರಲ್ಲಿ ಮಾಹಿತಿದಾರರ ವೈವಾಹಿಕ ಸ್ಥಿತಿಗತಿಗಳನ್ನು ಸೂಚಿಸುತ್ತದೆ. ನಮ್ಮ ಸಮಾಜದಲ್ಲಿ ವಿವಾಹಕ್ಕೆ ಮಹತ್ವದ ಸ್ಥಾನವಿದೆ. ಸಾಮಾಜಿಕ ನಿಯಮಗಳ ಪಾಲನೆಯಲ್ಲಿ ವಿವಾಹ ಒಂದು ವ್ಯವಸ್ಥೆ ಎಂದು ಪರಿಗಣಿಸಲಾಗುತ್ತದೆ. ಕುಟುಂಬ ವಿವಾಹಗಳಲ್ಲಿ ಪ್ರಮುಖವಾಗಿ ಎಕಪತ್ನಿತ್ವ ಬಹುಪತ್ನಿತ್ವ ಸಮೂಹ ವಿವಾಹಗಳೆಂದು ಪ್ರಮುಖವಾಗಿ ನಾಲ್ಕು ಭಾಗಗಳಿದ್ದರೂ ದಕ್ಷಿಣ ಭಾರತದಲ್ಲಿ ಮೊದಲ ಎರಡು ವಿವಾಹ ಪದ್ದತಿಗಳು ಅಧಿಕವಾಗಿ ಕಾಣಬಹುದಾಗಿದೆ. ಅದರಲ್ಲಿಯೂ ಏಕಪತ್ನಿತ್ವಕ್ಕೆ ಹೆಚ್ಚಿನ ಆಧ್ಯತೆ ಇದೆ. ಇಂತಹ ಸಂಧರ್ಭದಲ್ಲಿ ಪುನರ್‌ವಿವಾಹಕ್ಕೆ ಪ್ರಾದಾನ್ಯತೆ ಮೊದಲು ಇರಲಿಲ್ಲವಾದ್ದರಿಂದ ವಿಧವೆಯರ ಸಮಸ್ಯೆಗಳು ಅನೇಕ ಇದ್ದವು ಪ್ರಚಲಿತ ಸಮಾಜದಲ್ಲಿ ಪುನರ್‌ವಿವಾಹಕ್ಕೆ ಆದ್ಯತೆ ದೊರತಿರುವುದು ಸ್ವಾಗತಾರ್ಹ ೯೦% ಮಾಹಿತಿದಾರರು ವಿವಾಹಿತರಾಗಿರುವುದು ತಿಳಿದು ಬರುತ್ತದೆ. ೧೦% ಮಹಿಳೆಯರು ಇರುವುದು ತಿಳಿದುಬರುತ್ತದೆ.

**ಕೋಷ್ಟಕ ೩.೭ ಮಾಹಿತಿದಾರರ ವಿವಾಹ ಪದ್ಧತಿ**

| ಕ್ರ.ಸಂ. | ವಿವಾಹ ಪದ್ಧತಿ | ಸಂಖ್ಯೆ | ಶೇಕಡಾ |
|---|---|---|---|
| ೧ | ಸಂಪ್ರದಾಯ ಬದ್ಧ ವಿವಾಹ | ೯೮ | ೯೮ |
| ೨ | ಅಂತರ್ಜಾತಿ ಮತ್ತು ಪ್ರೇಮ ವಿವಾಹ | ೨ | ೨ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಕೋಷ್ಟಕ ೩.೭ರಲ್ಲಿ ಮಾಹಿತಿದಾರರ ವಿವಾಹ ಪದ್ಧತಿಯನ್ನು ಸೂಚಿಸುತ್ತದೆ. ಮೇಲೆ ವಿವರಿಸಿದಂತೆ ವಿವಾಹಗಳಲ್ಲಿ ಹಲವಾರು ಪ್ರಕಾರಗಳಿದ್ದರೂ ಪಾಶ್ಚತೀಕರಣದಿಂದಾಗಿ ವಿವಾಹ ಎಂಬ ಸಂಸ್ಥೆಯ ಮೇಲೆ ಅಧಿಕವಾದ ಪ್ರಭವ ಬೀರಿರುವುದು ತಿಳಿದು ಬರುತ್ತದೆ. ಆದರೆ ವಿವಾಹ ಪದ್ಧತಿಗಳಲ್ಲಿ ಸಂಪ್ರದಾಯಗಳು ಬದಲಾಗುತ್ತಿರುವುದು ತೀವ್ರವಾಗುತ್ತಿದ್ದರೂ ಗ್ರಾಮೀಣ ಪ್ರದೇಶಗಳಲ್ಲಿ ಸಂಪ್ರದಾಯ ಬದ್ದವಾದ ವಿವಾಹಗಳು ಜರುಗುವುದನ್ನು ಕಾಣಬಹುದಾಗಿದೆ. ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ೯೮% ವಿವಾಹಗಳು ಸಂಪ್ರದಾಯ ಬದ್ದವಾಗಿ ಆಗಿದ್ದಾರೆ. ೨% ಅಂತರ್ಜಾತಿಯ ಮತ್ತು ಪ್ರೇಮ ವಿವಾಹಗಳು ಆಗಿರುವುದು ಕಂಡುಬರುತ್ತದೆ.

**ಕೋಷ್ಟಕ ೩.೮ ಮಾಹಿತಿದಾರರ ಉದ್ಯೋಗ:**

| ಕ್ರ.ಸಂ. | ಉದ್ಯೋಗ | ಸಂಖ್ಯೆ | ಶೇಕಡಾ |
|---|---|---|---|
| ೧ | ಕೃಷಿಕರು (ಕೃಷಿ ಕಾರ್ಮಿಕರು) | ೭೦ | ೭೦ |
| ೨ | ಖಾಸಗಿ ಕೆಲಸ (ವ್ಯಾಪಾರ) | ೨೦ | ೨೦ |
| ೩ | ಸರ್ಕಾರಿ ಕೆಲಸ | ೧೦ | ೧೦ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಕೋಷ್ಟಕ ೩.೮ ರಲ್ಲಿ ಮಾಹಿತಿದಾರರ ಉದ್ಯೋಗ ಮಾಹಿತಿಯನ್ನು ಒಳಗೊಂಡಿದೆ. ೭೦% ಕೃಷಿ ಕೆಲಸ ಮಾಡುವವರಾಗಿದ್ದಾರೆ ೨೦% ಖಸಗಿ ಕೆಲಸ ಮಾಡಿದರೆ ೧೦% ಸರ್ಕಾರಿ ಕೆಲಸ ಮಾಡುವವರಾಗಿದ್ದಾರೆ.ಇದರಿಂದಾಗಿ ಕೃಷಿಯು ಗ್ರಾಮೀಣ ಪ್ರದೇಶದ ಮೂಲ ಕಸುಬು ಆಗಿರುವುದು ಕಂಡು ಬರುತ್ತದೆ.

**ಕೋಷ್ಟಕ ೩.೯ ಮಾಹಿತಿದಾರರು ಹೊಂದಿರುವ ಪಡಿತರ ಚೀಟಿ:**

| ಕ್ರ.ಸಂ. | ಪಡಿತರ ಚೀಟಿ | ಸಂಖ್ಯೆ | ಶೇಕಡಾ |
|---|---|---|---|
| ೧ | ಎ.ಪಿ.ಎಲ್ | ೧೦ | ೧೦ |
| ೨ | ಬಿ.ಪಿ.ಎಲ್ | ೮೦ | ೮೦ |
| ೩ | ಅಂತ್ಯೋದಯ | ೧೦ | ೧೦ |
| ೪ | ಇತರೆ | ೦ | ೦ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೯ರಲ್ಲಿ ಮಾಹಿತಿದಾರರು ಹೊಂದಿರುವ ಪಡಿತರ ಚೀಟಿಯ ವಿವರಣೆಯನ್ನು ಸೂಚಿಸುವುದಾಗಿದೆ. ನಮ್ಮ ಸಮಾಜದಲ್ಲಿ ಬಡವರ ಏಳಿಗೆಗಾಗಿ ಹಲವಾರು ಯೋಜನೆಗಳನ್ನು ರೂಪಿಸಿದೆ. ಅದರಲ್ಲಿ ಪಡಿತರ ಚೀಟಿಯ ಮೂಲಕ ಕಡಿಮೆ ದರದಲ್ಲಿ ಆಹಾರ ಧಾನ್ಯ ಮತ್ತು ಎಣ್ಣೆ ಇತ್ಯಾದಿಗಳನ್ನು ರಾಜ್ಯ ಮತ್ತು ಕೇಂದ್ರ ಸರಕಾರಗಳು ಒದಗಿಸುತ್ತವೆ. ೧೦% ಕೃಷಿಕರು ಎ.ಪಿ.ಎಲ್. ಚೀಟಿಯನ್ನು ಹೊಂದಿದವರಿದ್ದಾರೆ, ೮೦% ಕೃಷಿಕರು ಬಿ.ಪಿ.ಎಲ್. ಚೀಟಿಗಳನ್ನು ಹೊಂದಿದವರಾಗಿದ್ದಾರೆ, ೧೦% ಕೃಷಿಕರು ಅಂತ್ಯೋದಯ ಚೀಟಿಗಳನ್ನು ಹೊಂದಿದವರಾಗಿದ್ದಾರೆ. ಈ ಕೋಷ್ಟಕದಲ್ಲಿರುವ ಅಂಕಿ-ಅಂಶಗಳ ಪ್ರಕಾರ ಹೆಚ್ಚಿನ ಕೃಷಿಕರು ಬಿ.ಪಿ.ಎಲ್. ಚೀಟಿಯನ್ನು ಹೊಂದಿದವರು ಇರುವುದು ತಿಳಿಯುವುದು.

**ನಕ್ಷೆ :೩.೪**

ಮಾಹಿತಿದಾರರು ಹೊಂದಿರುವ ಪಡಿತರ ಚೀಟಿ ವಿವರ




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ ೩.೧೦ ಮಾಹಿತಿದಾರರ ಕುಟುಂಬದ ಸ್ವರೂಪ**

| ಕ್ರ.ಸಂ. | ಕುಟುಂಬದ ಸ್ವರೂಪ | ಸಂಖ್ಯೆ | ಶೇಕಡಾ |
|---|---|---|---|
| ೧ | ವಿಭಕ್ತ ಕುಟುಂಬ | ೯೫ | ೯೫ |
| ೨ | ಅವಿಭಕ್ತ ಕುಟುಂಬ | ೫ | ೫ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೧೦ ರಲ್ಲಿ ಮಾಹಿತಿದಾರರ ಕುಟುಂಬ ಸ್ವರೂಪದ ಬಗೆಗೆ ವಿವರಣೆ ಕೊಡುತ್ತದೆ. ಭಾರತವು ಹಳ್ಳಿಗಳ ದೇಶ ಶೇಕಡಾ ೮೦ ರಷ್ಟು ಜನ ಹಳ್ಳಿಗಳಲ್ಲಿ ವಾಸಿಸುತ್ತಾರೆ. ಅಂದರೆ ಆರು ಲಕ್ಷಕ್ಕೂ ಅಧಿಕವಾದ ಹಳ್ಳಿಗಳನ್ನು ಭಾರತದಲ್ಲಿ ಕಾಣುತ್ತೇವೆ. ಇವರ ಮೂಲ ಉದ್ಯೋಗ ಕೃಷಿ, ಹೆಚ್ಚು ಹೆಚ್ಚು ಜನರು ಇದ್ದರೆ ಕೃಷಿಗೆ ಅನುಕೂಲ ಪೂರಕವಾಗಿ ಅವಿಭಕ್ತ ಕುಟುಂಬಗಳು ಇರುವುದನ್ನು ಕಾಣುತ್ತೇವೆ. ಈ ಕೋಷ್ಟಕದ ಅಂಕಿ ಅಂಶಗಳ ಪ್ರಕಾರ ೯೫% ವಿಭಕ್ತ ಕುಟುಂಬಗಳು ೫% ಅವಿಭಕ್ತ ಕುಟುಂಬಗಳು ಇರುತ್ತವೆ.

**ನಕ್ಷೆ : ೩.೫**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ ೩.೧೧ ಮಾಹಿತಿದಾರರ ಕುಟುಂಬದ ಸದಸ್ಯರ ಸಂಖ್ಯೆ**

| ಕ್ರ.ಸಂ. | ಕುಟುಂಬದ ಸದಸ್ಯರು | ಸಂಖ್ಯೆ | ಶೇಕಡಾ |
|---|---|---|---|
| ೧ | ೧ ರಿಂದ ೨ | ೪೦ | ೪೦ |
| ೨ | ೩ ರಿಂದ ೪ | ೫೦ | ೫೦ |
| ೩ | ೫ ರಿಂದ ೬ | ೧೦ | ೧೦ |
| ಒಟ್ಟು | | ೧೦೦ | ೧೦೦ |

ಮೂಲ: ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೧೧ ರಲ್ಲಿ ಮಾಹಿತಿದಾರರ ಕುಟುಂಬದ ಸದಸ್ಯರ ಸಂಖ್ಯೆಯನ್ನು ವಿವರಿಸುತ್ತದೆ. ಹಿಂದಿನ ಕೋಷ್ಟಕದಲ್ಲಿ ಅವಿಭಕ್ತ ಕುಟುಂಬಗಳ ಸಂಖ್ಯೆ ೫% ಇರುವುದು ಕಂಡುಬಂದಿದೆ. ೪೦% ಮಾಹಿತಿದಾರರ ಕುಟುಂಬದಲ್ಲಿ ೧ ರಿಂದ ೨ ಸದಸ್ಯರಿದ್ದು, ೫೦% ೩ರಿಂದ೪ ಸದಸ್ಯರು ಇದ್ದು, ೧೦% ೫ ರಿಂದ ೬ ಸದಸ್ಯರು ಇರುವುದು ಕಂಡುಬರುತ್ತದೆ.

**ಕೋಷ್ಟಕ ೩.೧೨ ಮಾಹಿತಿದಾರರ ಕುಟುಂಬದ ವರ್ಗ**

| ಕ್ರ.ಸಂ | ಕುಟುಂಬವು ಇರುವ ವರ್ಗ | ಸಂಖ್ಯೆ | ಶೇಕಡಾ |
|---|---|---|---|
| ೧ | ಶ್ರೀಮಂತ ವರ್ಗ | ೦೨ | ೦೨ |
| ೨ | ಮಧ್ಯಮ ವರ್ಗ | ೬೦ | ೬೦ |
| ೩ | ಬಡ ವರ್ಗ | ೨೦ | ೨೦ |
| ೪ | ಬಡತನ ರೇಖೆಗಿಂತ ಕೆಳಗಿರುವ ವರ್ಗ | ೧೮ | ೧೮ |
| ಒಟ್ಟು | | ೧೦೦ | ೧೦೦ |

ಮೂಲ: ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೧೨ ಮಾಹಿತಿದಾರರ ಕುಟುಂಬವು ಇರುವ ವರ್ಗವನ್ನು ಸೂಚಿಸುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಈ ವರ್ಗ ವಿಭಜನೆಯನ್ನು ಕಾಣಬಹುದು. ಗ್ರಾಮಗಳಲ್ಲಿ ಮೇಲ್ವರ್ಗ ಕೆಳವರ್ಗ ಎಂಬ ಭೇದವು ದಿನನಿತ್ಯ ಜೀವನದ ಒಂದು ಅವಿಭಾಜ್ಯ ಅಂಗವಾಗಿ ಪರಿಣಮಿಸಿದೆ ಎಂದು ಹೇಳಬಹುದು. ಮೇಲಿನ ಕೋಷ್ಟಕದಲ್ಲಿ ೨% ರಷ್ಟು ಶ್ರೀಮಂತ ವರ್ಗದವರಿದ್ದರೆ. ೬೦% ಮಧ್ಯಮ ವರ್ಗದವರು, ೨೦% ಬಡವರ್ಗದವರು, ೧೮% ಬಡತನ ರೇಖೆಗಿಂತ ಕೆಳಗಿರುವ ವರ್ಗದವರು ಇರುವುದು ಅಧ್ಯಯನದ ಮೂಲಕ ತಿಳಿದು ಬರುತ್ತದೆ.

**ನಕ್ಷೆ : ೩.೬**




ಮೂಲ: ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ ೩.೧೩ ಮಾಹಿತಿದಾರರ ಕುಟುಂಬದ ಮುಖ್ಯಸ್ಥರು**

| ಕ್ರ.ಸಂ. | ಕುಟುಂಬದ ಮುಖ್ಯಸ್ಥರು | ಸಂಖ್ಯೆ | ಶೇಕಡಾ |
|---|---|---|---|
| ೧ | ತಂದೆ | ೨೦ | ೨೦ |
| ೨ | ತಾಯಿ | ೬೦ | ೬೦ |
| ೩ | ಗಂಡ | ೫ | ೫ |
| ೪ | ಅತ್ತೆ | ೫ | ೫ |
| ೫ | ಮಾವ | ೫ | ೫ |
| ೬ | ಮತ್ತಿತರರು | ೫ | ೫ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೩.೧೩ರಲ್ಲಿ ಮಹಿತಿದಾರರ ಕುಟುಂಬದ ಮುಖ್ಯಸ್ಥರ ವಿವರವನ್ನು ಸೂಚಿಸುತ್ತದೆ. ಪ್ರತಿಯೊಂದು ಕುಟುಂಬದ ಪ್ರಗತಿ ಅಧಃಪತನ ಕುಟುಂಬದ ಮುಖ್ಯಸ್ಥನ ಮೇಲೆ ಅವಲಂಬಿತವಾಗಿರುತ್ತದೆ. ಮುಖ್ಯಸ್ಥನು ಯಾವ ರೀತಿಯ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾನೆಯೋ ಅದರ ಮೇಲೆ ಆ ಕುಟುಂಬದ ಸದಸ್ಯರ ವರ್ತನೆಗಳು ನಿರ್ಣಯಗೊಳ್ಳುತ್ತದೆ. ಮೇಲಿನ ಕೋಷ್ಟಕದಲ್ಲಿ ೨೦% ಕುಟುಂಬಗಳಲ್ಲಿ ತಂದೆ ಮುಖ್ಯಸ್ಥನಾದರೆ, ೬೦% ಕುಟುಂಬಗಳಲ್ಲಿ ತಾಯಿ ಮುಖ್ಯಸ್ಥಳಾಗಿರುತ್ತಾರೆ. ಹಾಗೆಯೇ ೫% ಕುಟುಂಬಗಳಲ್ಲಿ ಗಂಡನು ಮುಖ್ಯಸ್ಥನಾದರೆ ೫% ಕುಟುಂಬಗಳಲ್ಲಿ ಅತ್ತೆ, ೫% ಕುಟುಂಬಗಳಲ್ಲಿ ಮಾವ, ೫% ಕುಟುಂಬಗಳಲ್ಲಿ ಮತ್ತಿತರರು ಮುಖ್ಯಸ್ಥರಾಗಿರುತ್ತಾರೆ. ಅಧಿಕ ಪ್ರಮಾಣದಲ್ಲಿ ತಾಯಿ ಕುಟುಂಬದ ಮುಖ್ಯಸ್ಥರಾಗಿರುವುದು ಕಂಡುಬರುತ್ತದೆ.

## ಕೋಷ್ಟಕ ೩.೧೪ ಮಾಹಿತಿದಾರರ ಕುಟುಂಬದ ಮುಖ್ಯಸ್ಥರು ಮಾಡುತ್ತಿರುವ ಉದ್ಯೋಗ

| ಕ್ರ.ಸಂ. | ಕುಟುಂಬದ ಮುಖ್ಯಸ್ಥರ ಉದ್ಯೋಗ | ಸಂಖ್ಯೆ | ಶೇಕಡಾ |
|---|---|---|---|
| ೧ | ಕೃಷಿ | ೭೦ | ೭೦ |
| ೨ | ವ್ಯಾಪಾರ | ೫ | ೫ |
| ೩ | ಕೂಲಿ | ೨೦ | ೨೦ |
| ೪ | ಸರ್ಕಾರಿ ನೌಕರಿ | ೫ | ೫ |
| ಒಟ್ಟು | | ೧೦೦ | ೧೦೦ |

**ಮೂಲ: ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ**

ಮೇಲಿನ ಕೋಷ್ಟಕ ಸಂಖ್ಯೆ ೩.೧೪ರಲ್ಲಿ ಮಾಹಿತಿದಾರರ ಕುಟುಂಬದ ಮುಖ್ಯಸ್ಥರು ಮಾಡುತ್ತಿರುವ ಉದ್ಯೋಗವನ್ನು ಸೂಚಿಸುತ್ತದೆ. ಕೃಷಿಕರು ಕುಟುಂಬದ ಮುಖ್ಯಸ್ಥರು ಮಾಡುವ ಉದ್ಯೋಗದ ಮೇಲೆ ಆ ಕುಟುಂಬದ ಆದಾಯ ಮತ್ತು ಖರ್ಚನ್ನು ಅವಲಂಬಿಸಿರುತ್ತದೆ. ಅಲ್ಲದೇ ಉಳಿದ ಸದಸ್ಯರು ಅದೇ ಉದ್ಯೋಗದಲ್ಲಿ ಮುಂದುವರಿಯುತ್ತಾರೆ. ೭೦% ಕುಟುಂಬದ ಮುಖ್ಯಸ್ಥರು ಕೃಷಿ ಉದ್ಯೋಗವನ್ನು ಅವಲಂಬಿಸಿದ್ದಾರೆ, ೫% ಕುಟುಂಬದ ಮುಖ್ಯಸ್ಥರು ವ್ಯಾಪಾರವನ್ನು ಉದ್ಯೋಗವಾಗಿಸಿಕೊಂಡಿದ್ದರೆ ೨೦% ಕುಟುಂಬದ ಮುಖ್ಯಸ್ಥರು ಕೂಲಿ ಮಾಡಿಕೊಂಡು ಹಾಗೇ ೫% ಕುಟುಂಬದ ಮುಖ್ಯಸ್ಥರು ಸರ್ಕಾರಿ ನೌಕರಿಯನ್ನು ಮಾಡಿಕೊಂಡಿರುವುದು ತಿಳಿದುಬರುತ್ತದೆ. ಹೆಚ್ಚಿನ ಕುಟುಂಬದ ಮುಖ್ಯಸ್ಥರು ಕೃಷಿ ಉದ್ಯೋಗದಲ್ಲಿರುವುದು ತಿಳಿದುಬರುತ್ತದೆ.

**ಕೋಷ್ಟಕ ೩.೧೫ ಮಾಹಿತಿದಾರರ ಆರೋಗ್ಯದ ಸ್ಥಿತಿ**

| ಕ್ರ.ಸಂ. | ಮಾಹಿತಿದಾರರ ಆರೋಗ್ಯ | ಸಂಖ್ಯೆ | ಶೇಕಡಾ |
|---|---|---|---|
| ೧ | ಉತ್ತಮವಾಗಿದೆ | ೭೦ | ೭೦ |
| ೨ | ಮಧ್ಯಮವಾಗಿದೆ | ೨೦ | ೨೦ |
| ೩ | ಸಾಧರಣವಾಗಿದೆ | ೫ | ೫ |
| ೪ | ಸರಿಯಾಗಿಲ್ಲ | ೫ | ೫ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕವು ಕೃಷಿಕರ ಮಾಹಿತಿದಾರರ ಆರೋಗ್ಯ ಸ್ಥಿತಿಗತಿಯ ಬಗ್ಗೆ ತಿಳಿಸುತ್ತದೆ. ೭೦% ಕೃಷಿಕರ ಆರೋಗ್ಯವು ಉತ್ತಮವಾಗಿದ್ದು ಉಳಿದಂತೆ ೨೦% ಕೃಷಿಕರ ಆರೋಗ್ಯ ಮಧ್ಯಮವಾಗಿದೆ ಹಾಗೇ ೫% ಕೃಷಿಕರ ಆರೋಗ್ಯ ಸ್ಥಿತಿ ಸಾಧಾರಣ ಹಾಗೂ ೫% ಕೃಷಿಕರ ಸ್ಥಿತಿ ಸರಿಯಾಗಿಲ್ಲ ಎಂದು ತಿಳಿದು ಬರುತ್ತದೆ.

**ನಕ್ಷೆ : ೩.೭**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

## ಉಲ್ಲೇಖಗಳು:

- ಪ್ರಾಥಮಿಕ ದತ್ತಾಂಶಗಳ ಮಾಹಿತಿದಾರರಿಂದ ಸಂಗ್ರಹಣೆ.
- ರಚಿತ ಸಂದರ್ಶನಾ ತಪಶೀಲನ್ನು ಪ್ರಮುಖ ತಂತ್ರವಾಗಿ ಬಳಸಲಾಯಿತು.
- ಕೃಷಿಕರ ಮನೆ ಮನೆಗಳಿಗೆ ಭೇಟಿ ನೀಡಿ ಸಂಗ್ರಹಿಸಿದ ಮಾಹಿತಿ.
- ಪ್ರಗತಿಪರ ರೈತರ ಸಂದರ್ಶನ.

# ಅಧ್ಯಾಯ –೪

## ಕ್ಷೇತ್ರ ಕಾರ್ಯಾಧಾರಿತ ಮಾಹಿತಿ ವಿಶ್ಲೇಷಣೆ

### ೪.೧. ಗ್ರಾಮೀಣ ಕೃಷಿಕರ ಆರ್ಥಿಕ ಸ್ಥಿತಿಗತಿ ಮತ್ತು ಕೃಷಿಕರ ಸಮಸ್ಯೆ

ಪ್ರಸ್ತುತ ನಾಲ್ಕನೇ ಅಧ್ಯಾಯದಲ್ಲಿ ಗ್ರಾಮೀಣ ಕೃಷಿಕರ ಆರ್ಥಿಕ ಸ್ಥಿತಿಗತಿ ಮತ್ತು ಕೃಷಿಕರ ಸಮಸ್ಯೆಗಳ ಕುರಿತು ಅಧ್ಯಯನ ಮಾಡಲಾಗಿದೆ. ನಾವು ಯಾವುದೇ ಅಧ್ಯಯನ ಕೈಗೊಂಡಾಗ ಆ ವಿಷಯದ ಸತ್ಯಾಸತ್ಯತೆಗಳನ್ನು ಅರಿಯಲು ಆರ್ಥಿಕ ಸ್ಥಿತಿಗಳನ್ನು ಅಧ್ಯಯನ ಮಾಡುವುದು ಅತ್ಯವಶ್ಯವಗಿದೆ.

ಗ್ರಾಮಗಳಲ್ಲಿ ಮೂಲ ಉದ್ಯೋಗ ಕೃಷಿಯಾದ್ದರಿಂದ ಕೃಷಿಕರ ಸಮಸ್ಯೆಗಳನ್ನು ತಿಳಿಯುವುದು ಅತೀ ಅವಶ್ಯವಾಗಿದೆ. ಆದ್ದುದರಿಂದ ಕೃಷಿಕರು ಸಮಸ್ಯೆಗಳು ತಿಳಿಯುವುದು ಮತ್ತು ಅವರು ಎದುರಿಸುತ್ತಿರುವ ಸವಾಲುಗಳನ್ನು ಅತ್ಯವಶ್ಯವಾಗಿದೆ. ಆದ್ದುದರಿಂದ ಗ್ರಾಮೀಣ ಕೃಷಿಕರ ಆರ್ಥಿಕ ಸ್ಥಿತಿಗತಿ ಮತ್ತು ಸಮಸ್ಯೆಗಳು ಅಧ್ಯಯನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ಕೋಷ್ಟಕ – ೪.೧ ಮಾಹಿತಿದಾರರ ಜಮೀನಿನ ವಿವರ

| ಕ್ರ.ಸಂ | ಮಾಹಿತಿದಾರರ ಹಿಡುವಳಿ | ಸಂಖ್ಯೆ | ಶೇಕಡಾ |
|---|---|---|---|
| ೧ | ಸಣ್ಣ ಹಿಡುವಳಿ | ೮೦ | ೮೦ |
| ೨ | ಮಧ್ಯಮ ಹಿಡುವಳಿ | ೧೮ | ೧೮ |
| ೩ | ದೊಡ್ಡ ಹಿಡುವಳಿ | ೨ | ೨ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೪.೧ ರಲ್ಲಿ ಮಾಹಿತಿದಾರರ ಭೂ ಹಿಡುವಳಿಯ ವಿವರವನ್ನು ಸೂಚಿಸುವುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಸಂಪತ್ತಿನ ವಿತರಣೆಯಲ್ಲಿ ಏರುಪೇರಾಗಿರುವುದು ಮೊದಲಿನಿಂದಲೂ ಇದೆ ಹೀಗಾಗಿ ಶ್ರೀಮಂತರು ಶ್ರೀಮಂತರಾಗುತ್ತಲೇ ಇರುತ್ತಾರೆ. ಪ್ರತಿಶತ ೮೦ ರಷ್ಟು ಸಣ್ಣ ಹಿಡುವಳಿದಾರರು ಇದ್ದಾರೆ. ಪ್ರತಿಶತ ೧೮ ರಷ್ಟು ಮಧ್ಯಮ ಹಿಡುವಳಿದಾರರನ್ನು ನಾವು ಕಾಣಬಹುದಾಗಿದೆ ಹಾಗೇ ಪ್ರತಿಶತ ೨ ರಷ್ಟು ದೊಡ್ಡ ಹಿಡುವಳಿದಾರರು ಇರುವುದನ್ನು ಕಾಣಬಹುದಾಗಿದೆ.

**ನಕ್ಷೆ : ೪.೧**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ – ೪.೨ ಕೃಷಿ ಚಟುವಟಿಕೆಯಲ್ಲಿ ಸೇವಾನುಭವ**

| ಕ್ರಮ ಸಂಖ್ಯೆ | ಸೇವಾ ಅನುಭವ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ೧–೫ ವರ್ಷ | ೧೦ | ೧೦ |
| ೨ | ೧೦–೨೫ ವರ್ಷ | ೪೦ | ೪೦ |
| ೩ | ೨೫ ವರ್ಷದಿಂದ ಹೆಚ್ಚು | ೫೦ | ೫೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೪.೨ ರಲ್ಲಿ ಮಾಹಿತಿದಾರರ ಕೃಷಿ ಚಟುವಟಿಕೆಯಲ್ಲಿ ಇರುವ ಸೇವಾನುಭವನ್ನು ಸೂಚಿಸುತ್ತದೆ. ಯಾವುದೇ ವೃತ್ತಿಯನ್ನು ಮಾಡಲು ಅದರಲ್ಲಿ ಸೇವಾನುಭವ ಅತೀ ಅವಶ್ಯಕ ಕೃಷಿಯು ಅದರ ಹೊರತಾಗಿಲ್ಲ, ಕೃಷಿಯಲ್ಲಿ ಸೇವಾ ಅನುಭವ ಮುಖ್ಯವಾಗಿರುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿಯು ಮುಖ್ಯ ಕಸುಬು ಆಗಿದ್ದು ಸೇವಾ ಅನುಭವ ಮಖ್ಯವಾಗಿರುತ್ತದೆ. ಅದೇ ರೀತಿ ಈ ಕೋಷ್ಟಕದಲ್ಲಿ ಕೃಷಿಯಲ್ಲಿ ಕೃಷಿಕರು ಹೊಂದಿರುವ ಸೇವಾ ಅನುಭವವನ್ನು ಸೂಚಿಸುತ್ತದೆ. ಪ್ರತಿಶತ ೧೦ ರಷ್ಟು ೧ ರಿಂದ ೫ ವರ್ಷ ಅನುಭವ ಹೊಂದಿದ್ದವರು ಇದ್ದಾರೆ. ಪ್ರತಿಶತ ೪೦ ರಷ್ಟು ೧೦ ರಿಂದ ೨೫ ವರ್ಷ ಸೇವಾ ಅನುಭವ ಹೊಂದಿದ ಕೃಷಿಕರನ್ನು ಕಾಣಬಹುದಾಗಿದೆ. ಪ್ರತಿಶತ ೫೦ ರಷ್ಟು ೨೫ ವರ್ಷದಿಂದ ಹೆಚ್ಚು ಕೃಷಿಯಲ್ಲಿ ಚಟುವಟಿಕೆಯಲ್ಲಿ ಹೊಂದಿರುವವರನ್ನು ಕಾಣಬಹುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿಕರು ಹೆಚ್ಚು ಕೃಷಿ ಚಟುವಟಿಕೆ ಅನುಭವ ಹೊಂದಿರುವವರನ್ನು ನಾವು ಕಾಣಬಹುದಾಗಿದೆ.

**ನಕ್ಷೆ : ೪.೨**

**ಕೃಷಿ ಚಟುವಟಿಕೆಯಲ್ಲಿ ಸೇವಾನುಭವ**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ – ೪.೩ ವಾರ್ಷಿಕ ಆದಾಯ**

| ಕ್ರಮ ಸಂಖ್ಯೆ | ಕುಟುಂಬದ ವಾರ್ಷಿಕ ಆದಾಯ ಕೃಷಿಯಿಂದ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ೬೦೦೦–೧೦೦೦೦ | ೧೦ | ೧೦ |
| ೨ | ೧೧೦೦೦–೧೫೦೦೦ | ೨೦ | ೨೦ |
| ೩ | ೧೬೦೦೦–೨೦೦೦೦ | ೬೫ | ೬೫ |
| ೪ | ೨೦೦೦೦ ಕ್ಕಿಂತ ಹೆಚ್ಚು | ೫ | ೫ |
|  | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ೪.೩ ಗ್ರಾಮೀಣ ಕೃಷಿಕರ ಆದಾಯವನ್ನು ಸೂಚಿಸುತ್ತದೆ. ಕುಟುಂಬದ ಆದಾಯವು ಕುಟುಂಬದ ಸದಸ್ಯರ ಆಹಾರ, ಬಟ್ಟೆ, ಆರೋಗ್ಯಗಳ ಮೇಲೆಯೂ ಪ್ರಭಾವ ಬೀರುತ್ತದೆ.ಆದಾಯವು ಮುಖ್ಯವಾಗಿದೆ. ಈ ಕೋಷ್ಟಕದ ಪ್ರಕಾರ ಪ್ರತಿಶತ ೧೦ ರಷ್ಟು ಕುಟುಂಬಗಳಲ್ಲಿ ೬೦೦೦ ದಿಂದ ೧೦೦೦೦ ವಾರ್ಷಿಕ ಆದಾಯವು ಕೃಷಿಯಿಂದ ಹೊಂದಿದ್ದಾರೆ. ಪ್ರತಿಶತ ೨೦ ರಷ್ಟು ಕುಟುಂಬಗಳು ೧೧೦೦೦ ದಿಂದ ೧೫೦೦೦ ರಷ್ಟು ವಾರ್ಷಿಕ ಆದಾಯ ಕೃಷಿಯಿಂದ ಹೊಂದಿದ್ದಾರೆ. ಪ್ರತಿಶತ ೬೫ ರಷ್ಟು ಕುಟುಂಬಗಳು ೧೬೦೦೦–೨೦೦೦೦ ವಾರ್ಷಿಕ ಆದಾಯ ಕೃಷಿಯಿಂದ ಹೊಂದಿದ್ದಾರೆ. ಪ್ರತಿಶತ ೫ ರಷ್ಟು ಕುಟುಂಬಗಳು ೨೦೦೦೦ ಕ್ಕಿಂತ ಹೆಚ್ಚು ವಾರ್ಷಿಕ ಆದಾಯ ಕೃಷಿಯಿಂದ ಹೊಂದಿದ್ದಾರೆ. ಪ್ರಸ್ತುತ ಅಧ್ಯಯನ ಪ್ರಕಾರ ಪ್ರತಿಶತ ೬೫ ರಷ್ಟು ಕುಟುಂಬಗಳಲ್ಲಿ ೧೬೦೦೦–೨೦೦೦೦ ವಾರ್ಷಿಕ ಆದಾಯ ಹೊಂದಿದವರೇ ಅಧಿಕವಾಗಿರುವುದನ್ನು ಗಮನಿಸಬಹುದಾಗಿದೆ.

**ನಕ್ಷೆ : ೪.೩**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ – ೪.೪ ಕೃಷಿ ಭೂಮಿ ಮಾರಿದ್ದೀರಾ?**

| ಕ್ರ.ಸಂ | ಕೃಷಿ ಭೂಮಿ ಮಾರಿದ ಉದ್ದೇಶ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಕೃಷಿ | ೯೬ | ೯೬ |
| ೨ | ಕೃಷಿಯೇತರ | ೪ | ೪ |
| ೩ | ಕೈಗಾರಿಕೆ | ೦ | ೦ |
| ೪ | ಇತರ | ೦ | ೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ ಸಂಖ್ಯೆ ೪.೪ ರಲ್ಲಿ ಮಾಹಿತಿದಾರರ ಕೃಷಿ ಭೂಮಿ ಮಾರಿದ ಉದ್ದೇಶವನ್ನು ಈ ಮೇಲಿನ ಕೋಷ್ಟಕ ಸೂಚಿಸುತ್ತದೆ. ಪ್ರತಿಶತ ೯೬ ರಷ್ಟು ಕೃಷಿಕರು ಕೃಷಿ ಉದ್ದೇಶದಿಂದ ಕೃಷಿ ಭೂಮಿಯನ್ನು ಮಾರಿದ್ದಾರೆ.ಪ್ರತಿಶತ ೪ ರಷ್ಟು ಕೃಷಿಯೇತರ ಚಟುವಟಿಕೆಗಾಗಿ ಮಾರಿದ್ದಾರೆ. ಒಂದು ವಿಪರ್ಯಾಸವೆಂದರೆ ಸಂಶೋಧಕನು ಸಂಶೋಧನೆ ಕೈಗೊಂಡ ಸ್ಥಳದಲ್ಲಿ ಕೈಗಾರಿಕೆಗೆ ಯಾವುದೇ ಭೂಮಿಯನ್ನು ಮಾರದಿರುವುದನ್ನು ನಾವು ಕಾಣಬಹುದಾಗಿದೆ.

**ಕೋಷ್ಟಕ – ೪.೫ ಕೃಷಿ ಕಾರ್ಮಿಕರ ಸಮಸ್ಯೆಗಳು**

| ಕ್ರ.ಸಂ | ಕಾರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಶಿಕ್ಷಣ | ೧೦ | ೧೦ |
| ೨ | ಉದ್ಯೋಗ | ೯೦ | ೯೦ |
| ೩ | ಸಾರಿಗೆ ಸಂಪರ್ಕ | ೦ | ೦ |
| ೪ | ಇತರ | ೦ | ೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಈ ಮೇಲಿನ ಕೋಷ್ಟಕದಲ್ಲಿ ಕೃಷಿ ಕಾರ್ಮಿಕರು ನಗರ ಪ್ರದೇಶಗಳಿಗೆ ವಲಸೆ ಹೋದವರ ಸಂಖ್ಯೆಯನ್ನು ಸೂಚಿಸುತ್ತದೆ. ಪ್ರತಿಶತ ೧೦ ರಷ್ಟು ಶಿಕ್ಷಣ ಉದ್ದೇಶದಿಂದ ನಗರ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ. ಪ್ರತಿಶತ ೯೦ ರಷ್ಟು ಕೃಷಿಕರು ಉದ್ಯೋಗಕ್ಕಾಗಿ ನಗರಗಳಿಗೆ ವಲಸೆ ಹೋಗಿದ್ದಾರೆ. ಉಳಿದಂತೆ ಸಾರಿಗೆ ಮತ್ತು ಇತರ ಕಾರಣಗಳಿಂದ ವಲಸೆ ಹೋಗಿರುವುದು ಕಂಡು ಬರುವುದಿಲ್ಲ. ಮೇಲಿನ ಕೋಷ್ಟಕವು ಸೂಚಿಸಿರುವಂತೆ ಪ್ರತಿಶತ ೯೦ ರಷ್ಟು ಕೃಷಿ ಕಾರ್ಮಿಕರು ಉದ್ಯೋಗ ಉದ್ದೇಶದಿಂದ ವಲಸೆ ಹೋಗಿರುವುದನ್ನು ಕಾಣಬಹುದಾಗಿದೆ.

## ಕೋಷ್ಟಕ – ೪.೬ ಕೃಷಿಯಲ್ಲಿರುವ ಆಸಕ್ತಿ

| ಕ್ರ.ಸಂ | ಮಾಹಿತಿದಾರರ ವಯಸ್ಸು | ಆಸಕ್ತಿ ಇರುವವರ ಸಂಖ್ಯೆ | ಶೇಕಡಾ |
|---|---|---|---|
| ೧ | ೧೮–೨೯ | ೨ | ೨ |
| ೨ | ೨೯–೩೮ | ೧೦ | ೧೦ |
| ೩ | ೪೯–೫೮ | ೫೦ | ೫೦ |
| ೪ | ೬೦ ಕ್ಕಿಂತ ಹೆಚ್ಚು | ೩೮ | ೩೮ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ –೪.೬ರಲ್ಲಿ ಗ್ರಾಮೀಣ ಪ್ರದೇಶದ ಕೃಷಿಕರಲ್ಲಿ ಕೃಷಿ ಬಗ್ಗೆ ಇರುವ ಆಸಕ್ತಿ ಬಗ್ಗೆ ಈ ಕೋಷ್ಟಕದ ಅಂಕಿ–ಅಂಶಗಳು ಸೂಚಿಸುತ್ತದೆ. ಹಾಗೆಮಾಹಿತಿದಾರರಲ್ಲಿರುವ ಕೃಷಿಯ ಆಸಕ್ತಿಯನ್ನು ತೋರಿಸಲಾಗಿದೆ. ಪ್ರತಿಶತ ೨ರಷ್ಟು ೧೮ ರಿಂದ ೨೯ ವಯಸ್ಸಿನ ಯುವ ಜನತೆಯಲ್ಲಿ ಕೃಷಿಯ ಬಗ್ಗೆ ಇರುವ ಆಸಕ್ತಿ ಕೇವಲ ೨ ಆಗಿದೆ. ಹಾಗೆ ಪ್ರತಿಶತ ೧೦ರಷ್ಟು ೨೯–೩೮ರ ವಯಸ್ಸಿನ ಕೃಷಿಕರು ಕೃಷಿಯಲ್ಲಿ ಆಸಕ್ತಿ ಹೊಂದಿದ್ದಾರೆ. ಹಾಗೆ ಪ್ರತಿಶತ ೫೦ರಷ್ಟು ೪೯–೫೮ ವಯಸ್ಸಿನ ಕೃಷಿಕರು ಕೃಷಿಯಲ್ಲಿ ಆಸಕ್ತಿ ಇರುವುದನ್ನು ಕಾಣಬಹುದು. ಹಾಗೆ ಪ್ರತಿಶತ ೩೮ರಷ್ಟು ೬೦ಕ್ಕಿಂತ ಹೆಚ್ಚು ವಯಸ್ಸಿನ ಕೃಷಿಕರು ಕೃಷಿಯ ಬಗ್ಗೆ ಆಸಕ್ತಿ ಇರುವುದನ್ನು ನಾವು ನೋಡಬಹುದಾಗಿದೆ.

ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಒಂದು ಸುಖಃಕರವಾದ ಸಂಗತಿಯೆಂದರೇ ಯುವ ಜನತೆ ಕೃಷಿಯಲ್ಲಿ ಆಸಕ್ತಿ ಇಲ್ಲದಿರುವುದು ಕಾಣಸಿಗುತ್ತದೆ. ಇದರಿಂದ ಗ್ರಾಮೀಣ ಪ್ರದೇಶದಲ್ಲಿ ಕೃಷಿಯ ಮಹತ್ವ ಕುಗ್ಗುತ್ತಿರುವುದು ಕಾಣಬಹುದಾಗಿದೆ.

**ನಕ್ಷೆ : ೪.೪**

**ಕೃಷಿಯಲ್ಲಿರುವ ಆಸಕ್ತಿ**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ – ೪.೭ ರೈತರು ಎದುರಿಸುತ್ತಿರುವ ಸಮಸ್ಯೆಗಳು**

| ಕ್ರ.ಸಂ | ರೈತರು ಎದುರಿಸುತ್ತಿರುವ ಸಮಸ್ಯೆಗಳು | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಸಣ್ಣ ಹಿಡುವಳಿಗಾತ್ರ | ೧೦ | ೧೦ |
| ೨ | ಹಣದ ಸಮಸ್ಯೆ | ೫೦ | ೫೦ |
| ೩ | ಮಾರುಕಟ್ಟೆ | ೧೦ | ೧೦ |
| ೪ | ಕೈಗಾರಿಕೆ | ೫ | ೫ |
| ೫ | ಕಾರ್ಮಿಕರ ಕೊರತೆ | ೨೫ | ೨೫ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ



ಈ ಕೋಷ್ಟಕದಲ್ಲಿ ಕುಂದಾಪುರ ತಾಲೂಕಿನಲ್ಲಿ ಇರುವ ಗ್ರಾಮೀಣ ಪ್ರದೇಶದ ರೈತಾಪಿ ಜನರು ಪಡುತ್ತಿರುವ ಸಮಸ್ಯೆಗಳನ್ನು ಸೂಚಿಸಲಾಗಿದೆ. ಈ ಕೋಷ್ಟಕದ ಪ್ರಕಾರ ಪ್ರತಿಶತ ೧೦ರಷ್ಟು ರೈತರು ಸಣ್ಣ ಹಿಡುವಳಿಯಿಂದ ಸಮಸ್ಯೆಯಾಗಿದೆ ಎಂದರೇ, ಪ್ರತಿಶತ ೫೦ರಷ್ಟು ರೈತರು ಹಣದ ಸಮಸ್ಯೆ ಮುಖ್ಯವಾದ ಸಮಸ್ಯೆಯಾಗಿದೆ ಎಂದಿದ್ದಾರೆ. ಪ್ರತಿಶತ ೧೦ರಷ್ಟು ರೈತರು ಮಾರುಕಟ್ಟೆ ಸಮಸ್ಯೆ ಎಂದು ಹೇಳುತ್ತಾರೆ. ಪ್ರತಿಶತ ೫ರಷ್ಟು ರೈತರು ಕೈಗಾರಿಕೆ ಸಮಸ್ಯೆ ಎಂದು ಹೇಳುತ್ತಾರೆ. ಪ್ರತಿಶತ ೨೫ರಷ್ಟು ರೈತರು ಕೃಷಿ ಕಾರ್ಮಿಕರ ಕೊರತೆ ಎಂದು ಹೇಳಿದ್ದಾರೆ.

ಈ ಮೇಲಿನ ಕೋಷ್ಟಕದಿಂದ ತಿಳಿಯುವುದು ಏನೆಂದರೆ ರೈತರು ಮುಖ್ಯವಾಗಿ ಎದುರಿಸುತ್ತಿರುವ ಸಮಸ್ಯೆ ಎಂದರೇ ಹಣದ ಸಮಸ್ಯೆ ಮತ್ತು ಕಾರ್ಮಿಕರ ಕೊರತೆ ಇರುವುದು ಮೇಲಿನ ಕೋಷ್ಟಕದಿಂದ ತಿಳಿಯುತ್ತದೆ.

**ಕೋಷ್ಟಕ – ೪.೮ ಕೃಷಿ ಭೂಮಿ ಕಡಿಮೆಯಾಗಲು ಕಾರಣ**

| ಕ್ರ.ಸಂ | ಕಾರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಕೈಗಾರಿಕೆ | ೨೦ | ೨೦ |
| ೨ | ನಗರೀಕರಣ | ೫ | ೫ |
| ೩ | ಕಾರ್ಮಿಕರ ಕೊರತೆ | ೧೦ | ೧೦ |
| ೪ | ಜನಸಂಖ್ಯೆ | ೫ | ೫ |
| ೫ | ಸರಕಾರದ ನಿರ್ಲಕ್ಷ | ೬೦ | ೬೦ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕ – ೪.೮ ಕೃಷಿ ಭೂಮಿ ಕಡಿಮೆಯಾಗಲು ಕಾರಣಗಳನ್ನು ಸೂಚಿಸುತ್ತದೆ.ಕೃಷಿ ಭಾರತ ದೇಶದ ಪ್ರಧಾನ ಕಸುಬು ಆಗಿದ್ದು, ಪ್ರಸ್ತುತ ಕೃಷಿ ಭೂಮಿ ಕಡಿಮೆ ಆಗುತ್ತಿರುವುದನ್ನು ನಾವು ಈ ಕೋಷ್ಟಕದಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಪ್ರತಿಶತ ೨೦ರಷ್ಟು ರೈತರು ಕೃಷಿ ಭೂಮಿ ಕಡಿಮೆಯಾಗಲು ಕೈಗಾರಿಕೆ ಕಾರಣವೆಂದು ಹೇಳಿದ್ದಾರೆ. ಪ್ರತಿಶತ ೫ರಷ್ಟು ರೈತರು ನಗರೀಕರಣ ಕೃಷಿ ಭೂಮಿ ಕಡಿಮೆಯಾಗಲು ಕಾರಣವೆಂದು ಹೇಳಿದ್ದಾರೆ. ಪ್ರತಿಶತ ೧೦ರಷ್ಟು ರೈತರು ಕೃಷಿ ಭೂಮಿ ಕಡಿಮೆಯಾಗಲು ಕಾರ್ಮಿಕರ ಕೊರತೆ ಕಾರಣವೆಂದು ಹೇಳಿದ್ದಾರೆ. ಪ್ರತಿಶತ ೫ರಷ್ಟು ರೈತರು ಜನಸಂಖ್ಯೆ ಕಾರಣವೆಂದು ಹೇಳಿದ್ದಾರೆ. ಪ್ರತಿಶತ ೬೦ರಷ್ಟು ರೈತರು ಕೃಷಿ ಭೂಮಿ ಕಡಿಮೆಯಾಗಲು ಸರಕಾರದ ನಿರ್ಲಕ್ಷವೇ ಕಾರಣವೆಂದು ಹೇಳಿದ್ದಾರೆ. ಈ ಮೇಲಿನ ಕೋಷ್ಟಕವನ್ನು ನೀಡಿದ್ದಾರೆ ಸರಕಾರದ ನಿರ್ಲಕ್ಷವೇ ಕೃಷಿ ಭೂಮಿ ಕಡಿಮೆಯಾಗಲು ಕಾರಣವೆಂದು ಹೇಳಿದ್ದಾರೆ.

**ಕೋಷ್ಟಕ – ೪.೯ ಯಾವ ರೀತಿಯ ಬೇಸಾಯ ಕ್ರಮ ಅನುಸರಿಸುತ್ತೀರಿ**

| ಕ್ರ.ಸಂ | ಬೇಸಾಯ ಕ್ರಮ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಹಳೆಯ ಪದ್ಧತಿ | ೫೦ | ೫೦ |
| ೨ | ವೈಜ್ಞಾನಿಕ ಪದ್ಧತಿ | ೫೦ | ೫೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಈ ಮೇಲಿನ ಕೋಷ್ಟಕದ ಸಂಖ್ಯೆ ೪.೯ರಲ್ಲಿ ರೈತರು ಯಾವ ರೀತಿ ಬೇಸಾಯ ಕ್ರಮ ಅನುಸರಿಸುತ್ತಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಮಾಹಿತಿದಾರರಲ್ಲಿ ಪ್ರತಿಶತ ೫೦ರಷ್ಟು ರೈತರು ಹಳೆಯ ಪದ್ಧತಿ ಅನುಸರಿಸುತ್ತಿದ್ದೇವೆ ಎಂದು ಹೇಳಿದ್ದಾರೆ. ಪ್ರತಿಶತ ೫೦ರಷ್ಟು ರೈತರು ವೈಜ್ಞಾನಿಕ ಪದ್ಧತಿ ಅನುಸರಿಸುತ್ತಿದ್ದೇವೆ ಎಂದು ಹೇಳಿದ್ದಾರೆ.

ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಗ್ರಾಮೀಣ ರೈತರು ಇನ್ನೂ ಕೂಡ ಹಳೆಯ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಗ್ರಾಮೀಣ ರೈತರು ಇನ್ನೂ ವೈಜ್ಞಾನಿಕ ಬೇಸಾಯ ಪದ್ಧತಿಯತ್ತ ಒಲವು ಇಲ್ಲದಿರುವುದು ಈ ಕೋಷ್ಟಕದಿಂದ ಸಪಷ್ಟವಾಗಿ ತಿಳಿದು ಬರುತ್ತದೆ. (ಇದರಿಂದ ಈ ಆರ್ಥಿಕತೆಯು ಇಳಿಮುಖವಾಗುತ್ತಿರುವುದನ್ನು ಕಾಣಬಹುದು.)

**ನಕ್ಷೆ : ೪.೫**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ – ೪.೧೦ ಕೃಷಿ ಕೆಲಸ ನಮ್ಮ ಬದುಕಿನ ಸಂಸ್ಕೃತಿ**

| ಕ್ರ.ಸಂ | ಕೃಷಿ ನಮ್ಮ ಬದುಕಿನ ಸಂಸ್ಕೃತಿ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಹೌದು | ೯೮ | ೯೮ |
| ೨ | ಇಲ್ಲ | ೨ | ೨ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮೇಲಿನ ಕೋಷ್ಟಕದ ಪ್ರಕಾರ ಕೃಷಿ ನಮ್ಮ ಬದುಕಿನ ಸಂಸ್ಕೃತಿ ಎಂಬುದನ್ನು ಎಲ್ಲಾ ರೈತರು ಒಪ್ಪಿರುತ್ತಾರೆ. ಪ್ರತಿಶತ ೯೮ರಷ್ಟು ರೈತರು ಕೃಷಿಯು ನಮ್ಮ ಸಂಸ್ಕೃತಿಯ ಭಾಗವಾಗಿದೆ ಎಂದು ಹೇಳುತ್ತಾರೆ. ಪ್ರತಿಶತ ೨ರಷ್ಟು ರೈತರು ಕೃಷಿ ಸಮಸ್ಕೃತಿಯ ಭಾಗವಲ್ಲ ಎಂದು ಹೇಳಿದ್ದಾರೆ.

ಈ ಮೇಲಿನ ಕೋಷ್ಟಕದ ಪ್ರಕಾರ ಕೃಷಿ ಬದುಕಿನ ಸಂಸ್ಕೃತಿಯ ಭಾಗವಾಗಿದೆ ಎನ್ನುವುದು ತಿಳಿದು ಬರುತ್ತದೆ. ಆದರೆ ಯುವ ಜನತೆ ಕೃಷಿಯಲ್ಲಿ ಆಸಕ್ತಿ ಕಡಿಮೆಯಾಗುತ್ತಿರುವುದನ್ನು ಕಾಣಬಹುದಾಗಿದೆ. ಕೃಷಿಯು ಗ್ರಾಮೀಣ ಬದುಕಿನ ಮೂಲ ಕಸುಬು ಆಗಿದ್ದು ಅದು ನಮ್ಮ ಸಂಸ್ಕೃತಿಯ ಒಂದು ಭಾಗವಾಗಿದೆ ಎಂದು ಎಲ್ಲಾ ರೈತರು ಹೇಳಿದ್ದಾರೆ.

**ಕೋಷ್ಟಕ – ೪.೧೧ ಕೃಷಿ ಮಾಡುವ ಉದ್ದೇಶ**

| ಕ್ರ.ಸಂ | ಉದ್ದೇಶ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಆಸಕ್ತಿ | ೨೦ | ೨೦ |
| ೨ | ಆರ್ಥಿಕ ಒತ್ತಡ | ೮೦ | ೮೦ |
| ೩ | ಇತರೆ | ೦ | ೦ |
| ಒಟ್ಟು | | ೧೦೦ | ೧೦೦ |

ಮೂಲ: ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಈ ಮೇಲಿನ ಕೋಷ್ಟಕವು (೪೦೧೧) ಮಾಹಿತಿದಾರರು ಕೃಷಿ ಮಾಡುವ ಉದ್ದೇಶವನ್ನು ಸೂಚಿಸುತ್ತದೆ. ಪ್ರತಿಶತ ೨೦ರಷ್ಟು ರೈತರು ಕೃಷಿಯನ್ನು ಆಸಕ್ತಿಯಿಂದ ಮಾಡುವವರಾಗಿದ್ದಾರೆ. ಪ್ರತಿಶತ ೮೦ರಷ್ಟು ರೈತರು ಆರ್ಥಿಕ ಒತ್ತಡದಿಂದ ಮಾಡುವವರು ಕಂಡು ಬರುತ್ತಾರೆ.

ಕೃಷಿಯು ಪ್ರಧಾನ ಕಸುಬು ಆಗಿದ್ದು ಕೃಷಿಯೇ ನಂಬಿ ಹಲವಾರು ರೈತರು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ. ಹಾಗೇ ಕೃಷಿಯೇ ಗ್ರಾಮೀಣ ಪ್ರದೇಶದ ರೈತರ ಮೂಲ ಆರ್ಥಿಕ ನೆಲೆಯಾಗಿದೆ.

ಈ ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ ೮೦ರಷ್ಟು ರೈತರು ಆರ್ಥಿಕ ಒತ್ತಡದಿಂದ ಕೃಷಿಯನ್ನು ಮಾಡುವವರು ಕಂಡು ಬರುತ್ತಾರೆ.

**ನಕ್ಷೆ : ೪.೬**




ಮೂಲ: ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

## ಕೃಷಿ ಲಾಭದಾಯಕ ವಲಯ

### ಕೋಷ್ಟಕ – ೪.೧೨

| ಕ್ರ.ಸಂ | ಲಾಭದಾಯಕ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಹೌದು | ೨ | ೨ |
| ೨ | ಇಲ್ಲ | ೯೮ | ೯೮ |
| ಒಟ್ಟು | | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಈ ಮೇಲಿನ ಕೋಷ್ಟಕವು (೪.೧೨) ಮಾಹಿತಿದಾರರ ಕೃಷಿ ವಲಯ ಲಾಭ ಅಥವಾ ನಷ್ಟ ಎನ್ನುವುದನ್ನು ಸೂಚಿಸುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿಯೇ ಮುಖ್ಯ ಕಸುಬು ಆಗಿದ್ದರಿಂದ ಕೃಷಿಯು ಲಾಭವೇ, ನಷ್ಟವೇ ಎನ್ನುವುದನ್ನು ರೈತರ ಬಳಿ ಕೇಳಿದಾಗ ಪ್ರತಿಶತ ೨ರಷ್ಟು ರೈತರು ಕೃಷಿಯು ಲಾಭದಾಯಕವಾಗಿದೆ ಎಂದು ಹೇಳಿದ್ದಾರೆ. ಪ್ರತಿಶತ ೯೮ರಷ್ಟು ರೈತರು ಕೃಷಿ ವಲಯ ಲಾಭದಾಯಕವಾಗಿಲ್ಲ ಎಂದು ಹೇಳಿದ್ದಾರೆ.

ಈ ಮೇಲಿನ ಕೋಷ್ಟಕದ ಪ್ರಕಾರ ಕೃಷಿ ಲಾಭದಾಯಕವಾಗಿಲ್ಲ ಇದೆ ಎನ್ನುವುದನ್ನು ಸ್ಪಷ್ಟವಾಗಿ ಅಂಕಿ–ಅಂಶಗಳು ತಿಳಿಸುತ್ತದೆ.

**ಕೋಷ್ಟಕ – ೪.೧೩ ಕೈಗಾರೀಕರಣ ಕೃಷಿಯ ಮೇಲೆ ಬೀರುವ ಪರಿಣಾಮಗಳು**

| ಕ್ರ.ಸಂ | ಪರಿಣಾಮ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಕೃಷಿ ಭೂಮಿ ಕಡಿಮೆಯಾಗುವುದು | ೧೦ | ೧೦ |
| ೨ | ಕೃಷಿ ಕಾರ್ಮಿಕರ ಕೊರತೆ | ೭೦ | ೭೦ |
| ೩ | ನೀರಾವರಿ ಕೊರತೆ | ೧೦ | ೧೦ |
| ೪ | ಆಹಾರೋತ್ಪನ್ನಗಳ ಕೊರತೆ | ೧೦ | ೧೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಈ ಮೇಲಿನ ಕೋಷ್ಟಕದಲ್ಲಿ ಕೈಗಾರಿಕರಣವು ಕೃಷಿಯ ಮೇಲೆ ಬೀರುವ ಪರಿಣಾಮಗಳನ್ನು ತೋರಿಸಲಾಗಿದೆ. ಪ್ರತಿಶತ ೧೦ರಷ್ಟು ರೈತರು ಕೃಷಿ ಭೂಮಿ ಕಡಿಮೆಯಾಗಲು ಕೈಗಾರಿಕರಣ ಎಂದು ಹೇಳಿದ್ದಾರೆ. ಪ್ರತಿಶತ ೭೦ರಷ್ಟು ರೈತರು ಕೈಗಾರಿಕರಣ ಬಬಬಬ ಕಾರ್ಮಿಕರ ಕೊರತೆಗೆ ಮೂಲ ಕಾರಣವೆಂದು ಹೇಳಿದ್ದಾರೆ. ಪ್ರತಿಶತ ೭೦ರಷ್ಟು ರೈತರು ನೀರಾವರಿ ಕಾರಣವೆಂದು ಹೇಳಿದ್ದಾರೆ. ಪ್ರತಿಶತ ೧೦ರಷ್ಟು ರೈತರು ಕೈಗಾರಿಕರಣದಿಂದ ಆಹಾರೋತ್ಪನ್ನಗಳ ಕೊರತೆ ಉಂಟಾಗುತ್ತದೆ ಎಂಬುದನ್ನು ಹೇಳುವುದು ಈ ಮೇಲಿನ ಕೋಷ್ಟಕದಿಂದ ತಿಳಿದು ಬರುತ್ತದೆ.

ಈ ಮೇಲಿನ ಕೋಷ್ಟಕದಿಂದ ಕೈಗಾರಿಕರಣದಿಂದ ಕೃಷಿ ಕಾರ್ಮಿಕರ ಕೊರತೆ ಉಂಟಾಗುತ್ತಿದೆ ಎಂಬುದನ್ನು ಮೇಲಿನ ಅಂಕಿ–ಅಂಶಗಳಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ.

**ಕೋಷ್ಟಕ – ೪.೧೪ ಕೃಷಿ ಉತ್ಪನ್ನಗಳ ಸಬ್ಸಿಡಿಗಳು ನಿಮಗೆ ತಿಳಿದಿದೆಯೇ**

| ಕ್ರ.ಸಂ | ಕೃಷಿ ಉತ್ಪನ್ನಗಳ ಸಬ್ಸಿಡಿಗಳ ಬಗ್ಗೆ ನಿಮಗೆ ತಿಳಿದಿದೆಯೇ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಹೌದು | ೧೦ | ೧೦ |
| ೨ | ಇಲ್ಲ | ೯೦ | ೯೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಮಾಹಿತಿದಾರರಲ್ಲಿ ಕೃಷಿ ಉತ್ಪನ್ನಗಳ ಸಬ್ಸಿಡಿಗಳ ಬಗ್ಗೆ ತಿಳಿದಿದೆಯೇ ಎಂದು ಕೇಳಿದಾಗ ಪ್ರತಿಶತ ೧೦ರಷ್ಟು ರೈತರು ಸಬ್ಸಿಡಿ ಬಗ್ಗೆ ನಮಗೆ ಮಾಹಿತಿ ಇದೆ ಎಂದು ಹೇಳಿದ್ದಾರೆ. ಪ್ರತಿಶತ ೯೦ರಷ್ಟು ರೈತರು ಇಲ್ಲ ಎಂಬ ಉತ್ತರವನ್ನು ನೀಡಿದ್ದಾರೆ.ಈ ಮೇಲಿನ ಕೋಷ್ಟಕವನ್ನು ನೋಡಿದಾಗ ಗ್ರಾಮೀಣ ಪ್ರದೇಶದ ರೈತರಿಗೆ ಕೃಷಿ ಉತ್ಪನ್ನಗಳಿಗೆ ಇರುವ ಸಬ್ಸಿಡಿ ಮಾಹಿತಿ ಇಲ್ಲದಿರುವುದು ಈ ಅಂಕಿ–ಅಂಶಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಸರಕಾರ ಕೃಷಿ ಉತ್ಪನ್ನಗಳಿಗೆ ಸಬ್ಸಿಡಿ ನೀಡಿದ್ದರೂ ಗ್ರಾಮೀಣ ಪ್ರದೇಶದ ರೈತರಿಗೆ ಮಾಹಿತಿ ಇಲ್ಲದಿರುವುದು ಅಂಕಿ–ಅಂಶಗಳ ಮೂಲಕ ಸ್ಪಷ್ಟವಾಗಿ ಕಂಡು ಬರುತ್ತದೆ.

**ನಕ್ಷೆ : ೪.೭**

**ಕೃಷಿ ಉತ್ಪನ್ನಗಳ ಸಬ್ಸಿಡಿಗಳು ನಿಮಗೆ ತಿಳಿದಿದೆಯೇ**




**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

**ಕೋಷ್ಟಕ –೪.೧೫ ಕೃಷಿ ಮಹತ್ವ ಕುಗ್ಗುತ್ತಿರಲು ಕಾರಣ**

| ಕ್ರ.ಸಂ | ಕಾರಣ | ಮಾಹಿತಿದಾರರ ಸಂಖ್ಯೆ | ಶೇಕಡಾ |
|---|---|---|---|
| ೧ | ಜಾಗತೀಕರಣ | ೦ | ೦ |
| ೨ | ನಗರೀಕರಣ | ೫ | ೫ |
| ೩ | ಶಿಕ್ಷಣ | ೪೫ | ೪೫ |
| ೪ | ಕಾರ್ಮಿಕರ ಕೊರತೆ | ೫೦ | ೫೦ |
| | ಒಟ್ಟು | ೧೦೦ | ೧೦೦ |

**ಮೂಲ:** ಪ್ರಾಥಮಿಕ ದತ್ತಾಂಶ ಮಾಹಿತಿದಾರರಿಂದ ಸಂಗ್ರಹಣೆ

ಈ ಮೇಲಿನ ಕೋಷ್ಟಕವು ಕೃಷಿ ಮಹತ್ವ ಕುಗ್ಗುತ್ತಿರಲು ಕಾರಣವನ್ನು ಸೂಚಿಸುತ್ತದೆ. ಪ್ರತಿಶತ ೫ರಷ್ಟು ರೈತರು ನಗರೀಕರಣ ಎಂದು ಹೇಳಿದ್ದಾರೆ. ಪ್ರತಿಶತ ೪೫ರಷ್ಟು ರೈತರು ಶಿಕ್ಷಣ ಕಾರಣ ಎಂದು ಹೇಳಿದ್ದಾರೆ. ಪ್ರತಿಶತ ೫೦ರಷ್ಟು ರೈತರು ಕಾರ್ಮಿಕರ ಕೊರತೆ ಎಂದು ಹೇಳಿದ್ದಾರೆ.

ಈ ಮೇಲಿನ ಕೋಷ್ಟಕವು ತಿಳಿಸುವಂತೆ ಕೃಷಿ ಮಹತ್ವ ಕುಗ್ಗುತ್ತಿರಲು ಪ್ರತಿಶತ ೫೦ರಷ್ಟು ರೈತರು ಕಾರ್ಮಿಕರ ಕೊರತೆಯಿಂದ ಕೃಷಿಯು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತದೆ ಎಂದು ಹೇಳಿದ್ದಾರೆ. ಪ್ರತಿಶತ ೪೫ರಷ್ಟು ರೈತರು ಶಿಕ್ಷಣ ಕಾರಣವೆಂದು ಹೇಳಿದ್ದಾರೆ.

ಈ ಮೇಲಿನ ಕಾರಣಗಳನ್ನು ಅಧ್ಯಯನ ಮಾಡಿದಾಗ ಗ್ರಾಮೀಣ ರೈತರು ಹಲವಾರು ರೀತಿಯಿಂದ ಕೃಷಿ ಸಮಸ್ಯೆಗಳನ್ನು ಅನುಭವಿಸುತ್ತಿರುವುದು ಕಂಡುಬಂದಿತ್ತು.

ರೈತರು ಕೃಷಿ ಕಾರ್ಮಿಕರ ಕೊರತೆ, ಆರ್ಥಿಕ ಒತ್ತಡ, ಸರಕಾರದ ಕೃಷಿಯ ಬಗ್ಗೆ ಇರುವ ನಿರ್ಲಕ್ಷ ಮುಂತಾದ ವಿಷಯಗಳು ರೈತರು ಹೇಳಿದ್ದಾರೆ. ಅಲ್ಲದೆ ಗ್ರಾಮೀಣ ಪ್ರದೇಶದ ರೈತರು ಉತ್ತಮ ಸ್ಥಿತಿಯಲ್ಲಿ ಇಲ್ಲದಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಹೆಚ್ಚಿನ ರೈತರು ಕೃಷಿಗೆ ವೈಜ್ಞಾನಿಕ ಬೆಂಬಲ ಕೃಷಿ ಉತ್ಪನ್ನಗಳಿಗೆ ಇಲ್ಲದಿರುವುದರ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿದ್ದಾರೆ.

ಈ ರೀತಿಯಾಗಿ ಪ್ರಸ್ತುತ ಅಧ್ಯಾಯದಲ್ಲಿ ದತ್ತಾಂಶಗಳ ವಿಶ್ಲೇಷಣೆಯ ಆಧಾರದ ಮೇಲೆ ಗ್ರಾಮೀಣ ರೈತರ ಆರ್ಥಿಕ ಮತ್ತು ಸಮಸ್ಯೆಗಳನ್ನು ತಿಳಿದುಕೊಂಡು ಅವುಗಳನ್ನು ಈ ಅಧ್ಯಾಯದಲ್ಲಿ ಮೇಲಿನಂತೆ ವಿವರಿಸಿದ್ದನ್ನು ನೋಡಬಹುದಾಗಿದೆ.

ಪ್ರಸ್ತುತ ಅಧ್ಯಯನವನ್ನು ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ೯ ಗ್ರಾಮಗಳಾದ ಹೊಂಬಾಡಿ–ಮಂಡಾಡಿ, ಯಡಾಡಿ–ಮತ್ಯಾಡಿ, ಜಪ್ತಿ, ಹಾರ್ದಳ್ಳಿ–ಮಂಡಳ್ಳಿ, ಹಳ್ನಾಡಿ–ಹರ್ಕಾಡಿ ಗ್ರಾಮಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಂಡಿದೆ. ನಾವು ಯಾವುದೇ ಅಧ್ಯಯನ ಕೈಗೊಂಡಾಗ ಸತ್ಯಾಸತ್ಯತೆಗಳನ್ನು ಅರಿಯಲು ಮತ್ತು ರೈತರ ಸ್ಥಿತಿಗತಿಗಳು ಸೇವಾ ಸೌಲಭ್ಯಗಳ ಬಗ್ಗೆ ಮಾಹಿತಿ ಕಲೆಹಾಕಲು ಮತ್ತು ಸಮುದಾಯದ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಕ್ಷೇತ್ರ ಅಧ್ಯಯನ ಮಾಡುವುದು ಅವಶ್ಯಕವಾಗಿರುತ್ತದೆ.

ಆಗ ಮಾತ್ರ ಆ ವಿಷಯದ ಬಗೆಗೆ ಸಂಪೂರ್ಣ ಮಾಹಿತಿ ಲಭ್ಯವಾಗಲು ಸಾದ್ಯವಾಗುತ್ತದೆ. ಈ ಧೃಷ್ಟಿಕೋನದಲ್ಲಿ ಪ್ರಸ್ತುತ ಸಂಶೋಧನೆಯನ್ನು ಪ್ರಾಥಮಿಕ ಹಾಗು ಪ್ರಾಥಮಿಕ ದತ್ತಾಂಶಗಳಿಂದ ಮತ್ತು ಕ್ಷೇತ್ರ ಅಧ್ಯಯನಗಳಿಂದ ಮಾಹಿತಿ ಸಂಗ್ರಹಿಸಿ

ಪ್ರಸ್ತುತ ಸಂಶೋಧನಾಧ್ಯಾಯನ ಮಾಡುವಾಗ ಕಂಡುಬಂದ ಅಂಶಗಳನ್ನು ಈ ಕೆಳಗಿನಂತೆ ಪಟ್ಟಿಮಾಡಲಾಗಿದೆ.

ಅವುಗಳು ಈ ರೀತಿಯಾಗಿದೆ.ಪ್ರಸ್ತುತ ವಿಷಯದ ಅಡಿಯಲ್ಲಿ ಸಂಶೋಧನಾಧ್ಯಾಯನ ಮಾಡುವಾಗ ಕಂಡುಬಂದ ಅಂಶಗಳು

ಅಧ್ಯಯನಕ್ಕೊಳಪಟ್ಟ ಹೆಚ್ಚಿನ ರೈತರಲ್ಲಿ ಅಂದರೇ ಪ್ರತಿಶತ ೫೦ರಷ್ಟು ಮಾಹಿತಿದಾರರು ೯ ರಿಂದ ೪೫ ವಯೋಮಾನದವರಾಗಿದ್ದಾರೆ.

**<u>ಉಲ್ಲೇಖಗಳು:</u>**

- ಪ್ರಾಥಮಿಕ ದತ್ತಾಂಶಗಳ ಮಾಹಿತಿದಾರರಿಂದ ಸಂಗ್ರಹಣೆ.
- ರಚಿತ ಸಂದರ್ಶನಾ ತಪಶೀಲನ್ನು ಪ್ರಮುಖ ತಂತ್ರವಾಗಿ ಬಳಸಲಾಯಿತು.
- ಕೃಷಿಕರ ಮನೆ ಮನೆಗಳಿಗೆ ಭೇಟಿ ನೀಡಿ ಸಂಗ್ರಹಿಸಿದ ಮಾಹಿತಿ.
- ಪ್ರಗತಿಪರ ರೈತರ ಸಂದರ್ಶನ.
- ಗ್ರಾಮೀಣಾಭಿವೃದ್ಧಿ ಅಧಿಕಾರಿಯಿಂದ ಮಾಹಿತಿ ಸಂಗ್ರಹಣೆ

## ಅಧ್ಯಾಯ – ೫

# ಸಾರಾಂಶ ಮತ್ತು ಸಲಹೆ ಸೂಚನೆಗಳು

### ೫.೧. ಪ್ರಸ್ತಾವನೆ:

ಐದನೇಯ ಅಧ್ಯಾಯವು ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ೯ ಗ್ರಾಮಗಳಲ್ಲಿ ಬದಲಾಗುತ್ತಿರುವ ಆರ್ಥಿಕತೆ ಕುಂದಾಪುರ ತಾಲೂಕಿನ ಒಂದು ಅಧ್ಯಯನ ಎನ್ನುವ ವಿಷಯಕ್ಕೆ ಸಂಬಂದಿಸಿದಂತೆ ನಡೆಸಿದ ಅಧ್ಯಯನದ ಸಾರಾಂಶ ಮತ್ತು ನೀತಿ ನಿರೂಪಣೆಯನ್ನು ಒಳಗೊಂಡಿದೆ. ಅಧ್ಯಯನಕ್ಕಾಗಿ ಅನುಷಂಗಿಕ ಮತ್ತು ಕ್ಷೇತ್ರ ಕಾಯಕ ಕೈಗೊಂಡ ಕಲೆ ಹಾಕಿದ ಮಾಹಿತಿಯ ದತ್ತಾಂಶಗಳನ್ನು ವಿಶ್ಲೇಷಿಸಿ ಹಾಗು ಸ್ವಂತ ಕೃಷಿ ಕ್ಷೇತ್ರದಲ್ಲಿದ್ದುಕೊಂಡು ಗಳಿಸಿದ ಅನುಭವವನ್ನು ಉಪಯೋಗಿಸಿಕೊಂಡು ಪ್ರಸ್ತುತ ಸಮಸ್ಯೆಗೆ ಪರಿಹಾರದ ರೂಪದಲ್ಲಿ ಸಲಹೆ ಸೂಚನೆಗಳನ್ನು ನೀಡುವ ಪ್ರಯತ್ನ ಮಾಎಲಾಗಿದೆ.

ದೇಶ ಸ್ವತಂತ್ರವಾಗಿ ದಶಕಗಳು ಕಳೆದಿದ್ದರೂ ಸಹಾ ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಪ್ರದಾನವಾದ್ದನ್ನು ನೋಡಬಹುದಾಗಿದೆ. ನಮ್ಮ ದೇಶದಲ್ಲಿ ಕೃಷಿಯು ಪ್ರಗತಿ ದೇಶದ ಒಟ್ಟು ಆರ್ಥಿಕತೆಯ ಭದ್ರರೂಪ ತಳಪಾಯವನ್ನು ಒದಗಿಸಿದೆ.

ಭಾರತ ಹಳ್ಳಿಗಳ ದೇಶ, ಜನಗಣತಿಯ ಆಧಾರದ ಮೇಲೆ ನಗರ ಪ್ರದೇಶಗಳೀಗಿಂತ ಗ್ರಾಮೀನ ಪ್ರದೇಶದಲ್ಲಿ ವಾಸಿಸುವ ಕೃಷಿಕರು (ರೈತರು) ಸಂಖ್ಯೆ ಹೆಚ್ಚಗಿರುತ್ತದೆ. ಆದ್ದರಿಂದ ಗ್ರಾಮೀಣ ರೈತರ ಸ್ಥಿತಿಗತಿಗಳು ಸುಧಾರಿಸದೇ ದೇಶದ ಅಭಿವೃದ್ದಿಯ ಚಿಂತನೆ ಅಸಾಧ್ಯ ಎಂದರೆ ತಪ್ಪಾಗಲಾರದು ಆದ್ದರಿಂದ ಗ್ರಾಮೀಣ ರೈತರ ಸ್ಥಿತಿಗತಿಗಳೇನು ಮತ್ತು ಅವರು ಕೃಷಿಯಲ್ಲಿ ಹೊಂದಿರುವ ಜ್ಞಾನ ಹಾಗೂ ಅವುಗಳನ್ನು ಎಷ್ಟರ ಮಟ್ಟಿಗೆ ಬಳಕೆ ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿದು ಜನರೆಲ್ಲಾ ಸೇರಿ ಮಾಡಬೇಕಾದ ಕೆಲಸ ಏನು ಎಂಬುದನ್ನು ಅರ್ಥ ಮಾಡಿಕೊಳ್ಳಲು ಅನುಕೂಲವಾಗುತ್ತದೆ.

ಕೈಗಾರಿಕೆ ಮತ್ತು ಸೇವಾ ವಲಯಗಳ ಅಭಿವೃದ್ದಿಯಲ್ಲಿ ಪೂರಕ ಪಾತ್ರವನ್ನು ವಹಿಸುವ ಕೃಷಿ ಕ್ಷೇತ್ರ ಇಂದೂ ಅದೇ ಹೆಚ್ಚಿನ ಸಂಖ್ಯೆಯ ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸುವುದರ ಜೊತೆಯಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರ ಭದ್ರತೆಯನ್ನು ಒದಗಿಸಿಕೊಟ್ಟು ದೇಶದ ಯೋಜನೆಗಳನ್ನು ರೂಪಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಿತ್ತಿದೆ. ಈ ಎಲ್ಲಾ ಕಾರಣಗಳಿಂದ ಅವಗಣನೆಗೆ ಒಳಗಾಗಿ ಜಾಗತೀಕರಣದ ಬಿಕ್ಕಟ್ಟಿನಿಂದ ಬೀಗಿಕೊಂಡಿರುವ ಕೃಷಿ ಕ್ಷೇತ್ರಕ್ಕೆ ಕಾಯಕಲ್ಪವನ್ನು ನೀಡಿ ಹೊಸ ಬದುಕನ್ನು ನೀಡುವ ಅನಿವಾರ್ಯತೆಯಿದೆ.

ಪ್ರಸ್ತುತ ಅಧ್ಯಯನವನ್ನು ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ೯ ಗ್ರಾಮಗಳಾದ ಹೊಂಬಾಡಿ–ಮಂಡಾಡಿ, ಯಡಾಡಿ–ಮತ್ಯಾಡಿ, ಜಪ್ತಿ, ಹಾರ್ದಳ್ಳಿ–ಮಂಡಳ್ಳಿ, ಹಳ್ನಾಡಿ–ಹರ್ಕಾಡಿ ಗ್ರಾಮಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಂಡಿದೆ. ನಾವು ಯಾವುದೇ ಅಧ್ಯಯನ ಕೈಗೊಂಡಾಗ

ಸತ್ಯಾಸತ್ಯತೆಗಳನ್ನು ಅರಿಯಲು ಮತ್ತು ರೈತರ ಸ್ಥಿತಿಗತಿಗಳು ಸೇವಾ ಸೌಲಭ್ಯಗಳ ಬಗ್ಗೆ ಮಾಹಿತಿ ಕಲೆಹಾಕಲು ಮತ್ತು ಸಮುದಾಯದ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಕ್ಷೇತ್ರ ಅಧ್ಯಯನ ಮಾಡುವುದು ಅವಶ್ಯಕವಾಗಿರುತ್ತದೆ.

ಆಗ ಮಾತ್ರ ಆ ವಿಷಯದ ಬಗೆಗೆ ಸಂಪೂರ್ಣ ಮಾಹಿತಿ ಲಭ್ಯವಾಗಲು ಸಾದ್ಯವಾಗುತ್ತದೆ. ಈ ಧೃಷ್ಟಿಕೋನದಲ್ಲಿ ಪ್ರಸ್ತುತ ಸಂಶೋಧನೆಯನ್ನು ಪ್ರಾಥಮಿಕ ಹಾಗು ಪ್ರಾಥಮಿಕ ದತ್ತಾಂಶಗಳಿಂದ ಮತ್ತು ಕ್ಷೇತ್ರ ಅಧ್ಯಯನಗಳಿಂದ ಮಾಹಿತಿ ಸಂಗ್ರಹಿಸಿ

ಪ್ರಸ್ತುತ ಸಂಶೋಧನಾಧ್ಯಾಯನ ಮಾಡುವಾಗ ಕಂಡುಬಂದ ಅಂಶಗಳನ್ನು ಈ ಕೆಳಗಿನಂತೆ ಪಟ್ಟಿಮಾಡಲಾಗಿದೆ.

ಅವುಗಳು ಈ ರೀತಿಯಾಗಿದೆ.

ಪ್ರಸ್ತುತ ವಿಷಯದ ಅಡಿಯಲ್ಲಿ ಸಂಶೋಧನಾಧ್ಯಾಯನ ಮಾಡುವಾಗ ಕಂಡುಬಂದ ಅಂಶಗಳು

೧] ಅಧ್ಯಯನಕ್ಕೊಳಪಟ್ಟ ಹೆಚ್ಚಿನ ರೈತರಲ್ಲಿ ಅಂದರೇ ಪ್ರತಿಶತ ೫೦ರಷ್ಟು ಮಾಹಿತಿದಾರರು ೯ ರಿಂದ ೪೫ ವಯೋಮಾನದವರಾಗಿದ್ದಾರೆ.

೨] ಮಾಹಿತಿದರರಲ್ಲಿ ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೭೦ರಷ್ಟು ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದ್ದಾರೆ ಮತ್ತು ಪ್ರತಿಶತ ೧೦ರಷ್ಟು ಮಾಹಿತಿದಾರರು ಅನಕ್ಷರಸ್ಥರಾಗಿದ್ದಾರೆ. ಹೆಚ್ಚು ಅನಕ್ಷರಸ್ಥ ರೈತರಲ್ಲಿ ಕೃಷಿಯ ಬಗ್ಗೆ ತಿಳುವಳಿಕೆ ಇಲ್ಲದೇ ಇರುವುದು ಕಾಣಬಹುದಾಗಿದೆ.

೩] ಮಾಹಿತಿದಾರರಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೯೫ರಷ್ಟು ಹಿಂದೂ ಧರ್ಮದ ರೈತರು ಇದ್ದು ಗರಿಷ್ಟ ಅಂದರೆ ೮೧ರಷ್ಟು ಹಿಂದುಳಿದ ವರ್ಗ (ಬಂಟ, ಕುಲಾಲ) ಸಮುದಾಯಕ್ಕೆ ಸೇರಿದ ರೈತರು ಇದ್ದಾರೆ. ಅಧ್ಯಯದಲ್ಲಿ ಎಲ್ಲಾ ಧರ್ಮಿಯರು ಮತ್ತು ಎಲ್ಲಾ ಜಾತಿಯ ವರ್ಗದವರು ಒಳಗೊಂಡಿರುವುದನ್ನು ಕಾಣಬಹುದಾಗಿದೆ.

೪] ಮಾಹಿತಿದಾರರಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೯೮ರಷ್ಟು ಮಾಹಿತಿದಾರರು ಕನ್ನಡ ಭಾಷೆಯನ್ನು ಮಾತನಾಡುವುದು ಕಂಡು ಬಂದಿತು. ಇದರ ಜೊತೆಗೆ ಇತರ ಭಾಷೆಗಳಾದ ಹಿಂದಿ, ಉರ್ದು ಭಾಷೆಯನ್ನು ಮಾತನಾಡುವವರಿದ್ದರು.

೫] ಮಾಹಿತಿದಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೯೦ರಷ್ಟು ಮಾಹಿತಿದಾರರು ವಿವಾಹಿತರಾಗಿರುವುದು ಕಂಡು ಬರುತ್ತದೆ. ಅಲ್ಲದೆ ಗರಿಷ್ಟ ಸಂಖ್ಯೆ ಅಂದರೆ ಪ್ರತಿಶತ ೯೮ರಷ್ಟು ಮಾಹಿತಿದಾರರು ಸಂಪ್ರದಾಯಬದ್ದ ವಿವಾಹವಾಗಿರುವುದು ಕಂಡು ಬಂದಿತು.

೬] ಹೆಚ್ಚಿನ ಮಾಹಿತಿದಾರರು ಅಂದರೆ ಪ್ರತಿಶತ ೭೦ರಷ್ಟು ರೈತರು ಕೃಷಿ ಕೆಲಸ ಮಾಡುತ್ತಿರುವುದು ಹಾಗು ಪ್ರತಿಶತ ೨೦ರಷ್ಟು ಖಾಸಗಿ ಕೆಲಸ (ವ್ಯಾಪಾರ) ಜೊತೆಗೆ ಕೃಷಿಯಲ್ಲಿ ತೊಡಗಿರುವುದು ಕಂಡು ಬಂದಿದೆ.

೭] ಮಾಹಿತಿದಾರರಲ್ಲಿ ಗರಿಷ್ಟ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೮೦ರಷ್ಟು ಮಾಹಿತಿದಾರರು ಬಿ.ಪಿ.ಎಲ್ ಪಡಿತರ ಚೀಟಿಯನ್ನು ಹೊಂದಿರುವುದು ಕಂಡು ಬಂದಿತು.

೮] ಮಾಹಿತಿದಾರರಲ್ಲಿ ಗರಿಷ್ಟ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೯೫ರಷ್ಟು ವಿಭಕ್ತ ಕುಟುಂಬವಿದ್ದು ಅಲ್ಲದೆ ಕುಟುಂಬದಲ್ಲಿ ೨ ರಿಂದ ೪ ಸದಸ್ಯರ ಸಂಖ್ಯೆ ಇರುವುದು ಕಂಡು ಬಂದಿತು ಹಾಗೂ ೧೦೦೦೦-೨೦೦೦೦ ಆದಾಯವನ್ನು ಹೊಂದಿರುವ ರೈತರ ಸಂಖ್ಯೆ ಹೆಚ್ಚಾಗಿ ಕಂಡು ಬಂದಿತು.

೯] ಮಾಹಿತಿದಾರರಲ್ಲಿ ಗರಿಷ್ಟ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೮೦ರಷ್ಟು ಮಾಹಿತಿದಾರರಲ್ಲಿ ಸಣ್ಣ ಹಿಡುವಳಿ ಹೊಂದಿರುವುದು ಕಂಡು ಬಂದಿತು.

೧೦] ಮಾಹಿತಿದಾರರಲ್ಲಿ ಗರಿಷ್ಟ ಸಂಖ್ಯೆಯಲ್ಲಿ ಅಂದರೆ ಪ್ರತಿಶತ ೫೦ರಷ್ಟು ರೈತರು ೨೫ ವರ್ಷದಿಂದ ಹೆಚ್ಚು ಕೃಷಿ ಚಟುವಟಿಕೆಗಳಲ್ಲಿ ಅನುಭವ ಹೊಂದಿರುವುದನ್ನು ನಾವು ಕಾಣಬಹುದು.

೧೧] ಪ್ರಸ್ತುತ ೯೦ರಷ್ಟು ಮಾಹಿತಿದಾರರಿಗೆ ಕೃಷಿ ಕಾರ್ಮಿಕರ ಕೊರತೆ ಬಗ್ಗೆ ತಿಳಿದಿದೆ ಎಂದು ಹೇಳಿದ್ದಾರೆ. ಅದರಲ್ಲಿ ಕೆಲವರು ಕೃಷಿ ಕಾರ್ಮಿಕರ ಕೊರತೆಗೆ ಉದ್ಯೋಗ, ಶಿಕ್ಷಣ, ಸರಕಾರದ ಕಾರಣವೆಂದು ತಮ್ಮ ನೋವನ್ನು ಹಂಚಿಕೊಂಡಿದ್ದು ಕಂಡು ಬಂದಿತು.

೧೨] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೫೦ರಷ್ಟು ರೈತರು ಹಳೆಯ ಪದ್ಧತಿ ಅನುಸರಿಸಿದರೆ, ಪ್ರತಿಶತ ೫೦ರಷ್ಟು ರೈತರು ವೈಜ್ಞಾನಿಕ ಪದ್ಧತಿಯಲ್ಲಿ ಕೃಷಿ ಮಾಡುತ್ತಿರುವುದು ಕಂಡು ಬಂದಿದೆ.

೧೩] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೮೦ರಷ್ಟು ರೈತರು ಕೃಷಿ ಮಾಡುವ ಉದ್ದೇಶ ಆರ್ಥಿಕ ಒತ್ತಡವೆಂದು ಹೇಳಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿಯೇ ಆರ್ಥಿಕತೆಯಮೂಲ ಅಂಶವೆನ್ನುವುದು ಕಂಡು ಬಂದಿತು.

೧೪] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೯೮ರಷ್ಟು ರೈತರು ಕೃಷಿ ಕೆಲಸ ನಮ್ಮ ಸಂಸ್ಕೃತಿಯ ಭಾಗವಾಗಿದ್ದು, ಅದು ಪುರಾತನ ಸಂಸ್ಕೃತಿಯಲ್ಲಿ ಒಂದಾಗಿದೆ ಎಂದು ಹೇಳುವುದು ಕಂಡು ಬಂದಿತ್ತು.

೧೫] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೭೦ರಷ್ಟು ರೈತರು ಕೈಗಾರಿಕರಣವು ಕೃಷಿ ಕಾರ್ಮಿಕರ ಕೊರತೆಗೆ ಮೂಲ ಕಾರಣವೆಂದು ಮತ್ತು ಕೃಷಿ ಭೂಮಿ ಕಡಿಮೆಯಾಗಲು ಕಾರಣವೆಂದು ಹೇಳುವುದು ಕಂಡು ಬಂದಿತು.

೧೬] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೫೦ರಷ್ಟು ರೈತರು ಕೃಷಿ ಮಹತ್ವ ಕುಗ್ಗುತಿರಲು ಕಾರ್ಮಿಕರ ಕೊರತೆ ಮತ್ತು ನಮ್ಮ ಶಿಕ್ಷಣ ನೀತಿಯು ಕಾರಣವೆಂದು ಕಳವಳ ವ್ಯಕ್ತಪಡಿಸಿದ್ದರು.

೧೭] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೯೦ರಷ್ಟು ರೈತರು ನಿಮಗೆ ಸರಕಾರದ ಯೋಜನೆಗಳ ಬಗ್ಗೆ ತಿಳಿದಿದೆಯೇ ಎಂದು ಕೇಳಿದಾಗ (ಕೃಷಿ ಉತ್ಪನ್ನಗಳ ಬಗ್ಗೆತಿಳಿದಿದೆಯೇ) ೯೦ರಷ್ಟು ಗೊತ್ತಿಲ್ಲ ಎಂಬ ಉತ್ತರ

ಬಂತು. ಸರಕಾರ ರೈತರಿಗಾಗಿ ಎಷ್ಟೇ ಯೋಜನೆ ರೂಪಿಸಿದ್ದರೂ ಗ್ರಾಮೀಣ ಪ್ರದೇಶದ ರೈತರಿಗೆ ಅದರಬಗ್ಗೆ ಮಾಹಿತಿ ಇಲ್ಲದಿರುವುದು ಸ್ಪಷ್ಟವಾಗಿ ಕಂಡು ಬಂದಿತ್ತು.

೧೮] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೭೦ರಷ್ಟು ರೈತರು ಆರೋಗ್ಯ ಉತ್ತಮವಾಗಿದೆ, ಸಾಮಾನ್ಯ ಆರೋಗ್ಯ ಪರೀಕ್ಷೆಗಳನ್ನು ಮಾಡಿಸಿದ್ದೇವೆ ಎಂದು ಹೇಳಿದರು.

೧೯] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೫೦ರಷ್ಟು ರೈತರು ಕೃಷಿಯಿಂದ ನಾವು ಆರ್ಥಿಕ ಒತ್ತಡದಲ್ಲಿ ಸಿಲಿಕಿದ್ದೇವೆ ಎಂದು ದುಃಖ ವ್ಯಕ್ತ ಪಡಿಸುವುದು ಕಂಡು ಬಂದಿತ್ತು.

೨೦] ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಅಂದರೆ ಪ್ರತಿಶತ ೯೮ರಷ್ಟು ರೈತರು ಯುವ ಜನತೆ ಕೃಷಿಯಿಂದ ದೂರ ಸರಿಯುತ್ತಿದೆ ಎಂದು ಹೇಳುವುದು ಕಂಡು ಬಂದಿತ್ತು. ಇವರ ಅರ್ಥ ಯುವ ಜನತೆಗೆ ಕೃಷಿಯ ಮೇಲೆ ಆಸಕ್ತಿ ಇಲ್ಲದಿರುವುದು ಸ್ಪಷ್ಟವಾಗಿ ಕಂಡು ಬಂದಿತ್ತು. ಇದೇ ಪರಿಸ್ಥಿತಿ ಮುಂದುವರೆದರೆ ಆಹಾರ ಕೊರತೆ ಜೊತೆಗೆ ಕೃಷಿಯು ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುತ್ತದೆ ಎನ್ನುವ ವಿಷಯ ರೈತರು ವ್ಯಕ್ತ ಪಡಿಸಿದ್ದರು.

## ೫.೨. ಪ್ರಾಕ ಕಲ್ಪನೆಗಳ ದೃಢೀಕರಣ

ಸಂಶೋಧನೆ ರಚಿಸಿಕೊಂಡಿರುವ ಪ್ರಾಕ ಕಲ್ಪನೆಗಳು ದೃಢಪಟ್ಟಿರುವುದು ಇಲ್ಲಿ ಮುಖ್ಯವಾಗಿ ಕಂಡು ಬರುತ್ತದೆ. ಅವುಗಳನ್ನು ಈ ಕೆಳಕಂಡಂತೆ ಸಂಕ್ಷಿಪ್ತ ನಮೂದಿಸಲಾಗಿದೆ.

೧] ಒಂದು ಪ್ರದೇಶದ ಕೃಷಿಯೇತರ ಮೂಲಗಳಿಂದ ಅಭಿವೃದ್ಧಿ ಹೊಂದಿದಂತೆ ಕೃಷಿ ಆರ್ಥಿಕತೆ ಮೇಲಿನ ಅವಲಂಬನೆ ಕಡಿಮೆಯಾಗುತ್ತದೆ ಎನ್ನುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

೨] ಭೂಮಿಯ ಪ್ರಮಾಣ ಮಿತವಾಗಿ ಸ್ಥಿರವಾಗಿ ಇರುವುದರಿಂದ ಮತ್ತು ಬೆಳೆಯುತ್ತಿರುವ ಜನಸಂಖ್ಯೆಗೆ ಕೊರತೆ ಇಲ್ಲದಂತೆ ಆಹಾರ ಪದಾರ್ಥಗಳನ್ನು ಪೂರೈಕೆ ಮಾಡಬೇಕಾಗಿರುವ ಕಾರಣದಿಂದ ಕೃಷಿ ವಲಯದಲ್ಲಿ ತಾಂತ್ರಿಕ ಮುನ್ನಡೆಯು ಪ್ರಾಶಸ್ತ್ಯವನ್ನು ಪಡೆದುಕೊಳ್ಳುತ್ತದೆ ಎನ್ನುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

೩] ಕೃಷಿಯು ವಾಣಿಜ್ಯಕರಣಗೊಳ್ಳುತ್ತಿದೆ ಎಂದರೆ ಲಾಭ ಕಡಿಮೆಯಾದಾಗ ಕೃಷಿಯ ಕುರಿತಾದ ಆಸಕ್ತಿ ಕಡಿಮೆಯಾಗಿತ್ತದೆ ಎನ್ನುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

೪] ಪರಿವರ್ತನೆಗೊಳ್ಳುತ್ತಿರುವ ಆರ್ಥಿಕತೆಯಲ್ಲಿ ಕೃಷಿ ವ್ಯವಸ್ಥೆಯಲ್ಲಿ ಆಹಾರ ಬೆಳೆಗಳಿಗೆ ಬದಲಾಗಿ ವಾಣಿಜ್ಯ ಬೆಳೆಗಳನ್ನು ಅಧಿಕ ಪ್ರಮಾಣದಲ್ಲಿ ಬೆಳೆಯಲಾಗುತ್ತಿದೆ ಎನ್ನುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

ಈ ರೀತಿಯಾಗಿ ಸಂಶೋಧನೆಗೆ ರಚಿಸಿಕೊಂಡಿರುವ ಪ್ರಾಕ ಕಲ್ಪನೆಗಳು ದೃಢಪಟ್ಟಿರುವುದು ಕಂಡು ಬರುತ್ತದೆ.

## ೫.೩. ಸಲಹೆಗಳು

ಈ ಸಂಶೋಧನಾ ಅಧ್ಯಯನ ಸಮಯದಲ್ಲಿ ಸಂಗ್ರಹಿಸಿದ ನಂಬಲರ್ಹವಾದ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಕೃಷಿಕರ (ರೈತರ) ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನರಿತ ಸಮಸ್ಯೆಗಳನ್ನು ಉತ್ತಮ ಪಡಿಸಲು ಈ ಕೆಳಗಿನಂತೆ ಕೆಲವು ಸಲಹೆಗಳನ್ನು ಕೊಡಲಾಗಿದೆ, ಅವು ಈ ರೀತಿಯಾಗಿದೆ

೧} ಕೃಷಿ ಭೂಮಿಯನ್ನು ಕೃಷಿಗೆ ಮಾತ್ರ ಬಳಸಬೇಕು.

೨} ಯುವ ಜನಾಂಗಕ್ಕೆ ಕೃಷಿ ಮಾಹಿತಿ ನೀಡಬೇಕು ಮತ್ತು ಶಿಕ್ಷಣ ವ್ಯವಸ್ಥೆಯಲ್ಲಿ ಕೃಷಿ ಅಧ್ಯಯನವನ್ನು ಒಳಪಡಿಸಬೇಕು.

೩} ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಸಂಶೋಧನಾ ಕೇಂದ್ರಗಳನ್ನು ಸರಕಾರ ಸ್ಥಾಪಿಸಬೇಕು.

೪} ಕೃಷಿ ಉತ್ಪನ್ನಗಳಿಗೆ ಸರಕಾರ ವೈಜ್ಞಾನಿಕ ಬೆಂಬಲ ಬೆಲೆ ನೀಡಬೇಕು.

೫} ಗ್ರಾಮೀಣ ಪ್ರದೇಶದ ರೈತರಿಗೆ ಕೃಷಿಯ ಮಹತ್ವವನ್ನು ತಿಳಿಸಬೇಕು.

೬} ಕೃಷಿಗೆ ಒಳಪಡದ (ಹಡು ಹಾಕಿದ) ಕೃಷಿ ಭೂಮಿಯನ್ನು ಸರಕಾರ ವಶಪಡಿಸಿಕೊಂಡು ಯೋಗ್ಯ ಕೃಷಿಕರಿಗೆ ನೀಡಬೇಕು.

೭}ಸರಕಾರವು ಗ್ರಾಮೀಣ ಕೃಷಿ ಕಾರ್ಮಿಕರಿಗೆ ಹೆಚ್ಚಿನ ಗೌರವ ಧನ ನೀಡಿ ವಲಸೆ ಹೋಗದಂತೆ ತಡೆಯಬೇಕು.

೮} ಸರಕಾರವು ಕೃಷಿಕರಿಗೆ ಉತ್ತಮ ಮಾರುಕಟ್ಟೆ ವ್ಯವಸ್ಥೆಯನ್ನು ಮಾಡಬೇಕು.

೯} ಕೈಗಾರಿಕೆಗಳು ಕೃಷಿಗೆ ಪೂರಕವಾಗಿರಬೇಕು ಅಂದರೆ ಗ್ರಾಮೀಣ ಪ್ರದೇಶದಲ್ಲಿ ಕೈಗಾರಿಕೆಗಳು ಸ್ಥಾಪನೆಗೆ ಅನುಮತಿ ನೀಡುವ ಮುಂಚೆ ಕೃಷಿಗೆ ಪೂರಕವಾದ ಕೈಗಾರಿಕೆಗಳಿಗೆ ಅನುಮತಿ ನೀಡಬೇಕು.

೧೦} ಸರಕಾರವು ಗ್ರಾಮೀಣ ಪ್ರದೇಶದ ರೈತರಿಗೆ ಹೆಚ್ಚಿನ ಶಿಕ್ಷಣ ಸೌಲಭ್ಯ ನೀಡಬೇಕು.ರೈತರ ಮಕ್ಕಳಿಗೆ ಅನುಕೂಲವಾಗುವಂತೆ ಕೃಷಿ ವಿಶ್ವವಿಧ್ಯಾನಿಲಯಗಳನ್ನು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿಸಬೇಕು. ಅವರ ಮೂಲಕ ಕೃಷಿಯ ಮಹತ್ವವನ್ನು ಸಾರಬೇಕು.

೧೧} ಕೃಷಿಕರಿಗೆ ಉತ್ತಮ ಬೀಜ, ರಾಸಾಯನಿಕ ಗೊಬ್ಬರ ನೀಡಿ ಕೃಷಿಯನ್ನು ಲಾಭದಾಯಕವಾಗಿ ಮಾಡಬೇಕು.

೧೨} ಸರಕಾರವು ಗ್ರಾಮೀಣ ಪ್ರದೇಶದ ಪ್ರಗತಿಪರ ರೈತರನ್ನು ಗುರುತಿಸಿ ಗೌರವಿಸಬೇಕು. ಅವರ ಮೂಲಕ ಶಾಲಾ ಕಾಲೇಜುಗಳಿಗೆ ಕೃಷಿ ಬಗ್ಗೆ ಅವರಿಂದ ಮಾಹಿತಿ ನೀಡಬೇಕು.

೧೩} ಸರಕಾರವು ಆಹಾರ ಬೆಳೆಗಳಿಗೆ ಹೆಚ್ಚಿನ ಸಬ್ಸಿಡಿ ನೀಡಬೇಕು.

೧೪} ಸರಕಾರವು ರೈತರಿಗೆ ಕಡಿಮೆ ಬಡ್ಡಿಯಲ್ಲಿ ಸಾಲ ನೀಡಿ ಬಂಡವಾಳ ಕೊರತೆ ಆಗದಂತೆ ನೋಡಿಕೊಳ್ಳಬೇಕು.

## ೫.೪. ಸಮಾಪ್ತಿ:

ಮೇಲಿನ ಎಲ್ಲಾ ಕಾರ್ಯಕ್ರಮಗಳು ಸೌಲಭ್ಯಗಳು ಕಾರ್ಯರೂಪಕ್ಕೆ ಬರಬೇಕಾದರೆ ಎಲ್ಲಾ ಜನರು ಹಾಗು ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು, ವಿದ್ಯಾವಂತರು, ಸಂಶೋಧಕರು ಸರ್ಕಾರದ ಜೊತೆ ಕೈ ಜೋಡಿಸಿದರೆ ಮಾತ್ರ ಯಾವುದೇ ಯೋಜನೆಗಳು ಕಾರ್ಯರೂಪಕ್ಕೆ ಬರುವುದರ ಜೊತೆಗೆ ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

(ಕೃಷಿಯ ಮೇಲಿನ ಹೂಡಿಕೆಯನ್ನು ಹೆಚ್ಚಿಸಿ ಕೃಷಿ ಕ್ಷೇತ್ರದ ಉತ್ಪಾದಕತೆಯನ್ನು ದ್ವಿಗುಣಗೊಳಿಸಿದಾಗ ಕೃಷಿ ಕ್ಷೇತ್ರ ಹೆಚ್ಚು ಅಕರ್ಷಿತವಾಗುವುದರ ಜೊತೆಯಲ್ಲಿ ಕೃಷಿ ಅಭಿವೃದ್ಧಿ ಸಾದ್ಯ)

## ಭೂಪಟ ಮತ್ತು ಕೃಷಿಗೆ ಸಂಬಂಧಿಸಿದ ಚಿತ್ರಗಳು

ಕರ್ನಾಟಕ ರಾಜ್ಯ:



ಉಡುಪಿ ಜಿಲ್ಲೆ:


UDUPI DISTRICT MAP
N
W
E
S
LEGEND
- DISTRICT BOUNDARY
- TALUKA BOUNDARY
- GP BOUNDARY
- DISTRICT HQ
- TALUKA HQ
- NATIONAL HIGHWAY
- STATE HIGHWAY
- RAILWAYS
- WATER BODY
KSCST
0 5 10
kilometers
PREPARED BY :DISTRICT NRDMS CENTRE
ZILLAPANCHAYATH UDUPI

## ಕುಂದಾಪುರ ತಾಲೂಕು


KUNDAPURA TALUK MAP
N
W
E
S
LEGEND
-TALUKA BOUNDARY
-GP BOUNDARY
-TALUKA HQ
-WATER BODY
-NATIONALHIGHWAY
-STATE HIGHWAY
-OTHER ROADS
-RAILWAYS
BHATKALA
SAGARA
HOSANAGARA
THIRTHAHALLI
KARKALA
UDUPI
ARABIAN SEA
ARABIAN SEA
KOLLUR
JADKAL
GOLIHOLE
KALTHODU
HEROOR
ALOOR
CHITTOOR
KERADI
HALLIHOLE
HAKLADI
VANDSE
HOSANGADI
AJRI
TRAASI
HEMMADI
GUJJADI
SIDDAPUR
AMPAR
KAVRADY
BASRUR
BALKUR
AMASEBAILU
MOLAHALLI
KALAVARA
BELOOR
MADAMAKKI
PREPARED BY : DISTRICT NRDMS CENTRE,ZP,UDUPI
0
5
10
kilometers
KSCST

**ಪ್ರಶ್ನಾವಳಿಗಳು (ಸಂದರ್ಶನ ಪಟ್ಟಿ)**

## ಪ್ರಶ್ನಾವಳಿಗಳು

"ಬದಲಾಗುತ್ತಿರುವ ಕೃಷಿ ಆರ್ಥಿಕತೆ: ಕುಂದಾಪುರ ತಾಲೂಕಿನ ಒಂದು ಅಧ್ಯಯನ" ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವು ಕೃಷಿ ಕಾರ್ಮಿಕರ ಆರ್ಥಿಕ ಅಭಿವೃದ್ದಿಯಲ್ಲಿ ಅವರ ಕೊಡುಗೆಯನ್ನು ಪರಿಶೀಲಿಸುವುದು ಮತ್ತು ಸ್ಪರ್ಧಾತಕತೆಯನ್ನು ಹೆಚ್ಚಿಸುವ ಸಾಧ್ಯತೆಗಳ ಬಗ್ಗೆ ಅರಿವು ಮೂಡಿಸುವುದು.

**ಸೂಚನೆಗಳು:**

ಈ ಪ್ರಶ್ನಾವಳಿಯಲ್ಲಿ ವಿವಿಧ ಪ್ರಕಾರದ ಪ್ರಶ್ನೆಗಳಿಗೆ ಚುಟುಕಾಗಿ ಉತ್ತರಿಸಬಹುದು ಮತ್ತು ಕೆಲವು ಪ್ರಶ್ನೆಗಳಿಗೆ ಕೊಟ್ಟ ಉತ್ತರದಲ್ಲಿ ಸರಿಯಾದುದನ್ನು ಉತ್ತರಿಸಬಹುದು.

- ಈ ಸಮೀಕ್ಷೆಯನ್ನು ಕೇವಲ ಅಧ್ಯಯನದ ಉದ್ದೇಶಕ್ಕಾಗಿ ಮಾತ್ರ ಬಳಸಿಕೊಂಡಿರುತ್ತೇನೆ.
- ನೀವು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಗೌಪ್ಯತೆಯನ್ನು ಕಾಪಾಡಲಾಗುವುದು.
- ನಿಮ್ಮ ಇತರ ಉಪಯುಕ್ತ ಸಲಹೆ ಮತ್ತು ಪೂರಕ ಅಭಿಪ್ರಾಯಗಳನ್ನು ಕ್ರತಜ್ಞತಾ ಪೂರಕವಾಗಿ ಸ್ವೀಕರಿಸಲಾಗುವುದು.
- ನಿಮ್ಮ ಸಹಕಾರಕ್ಕಾಗಿ ಅನಂತ ಕೃತಜ್ಞತೆಗಳು.

**ವೈಯಕ್ತಿಕ ಮಾಹಿತಿ**

೧. ಮಾಹಿತಿದಾರರ ಹೆಸರು ಮತ್ತು ವಿಳಾಸ

೨. ಮಾಹಿತಿದಾರರು ಕೃಷಿ ಭೂಮಿಯ ಒಡೆತನ ಹೊಂದದಿದ್ದಲ್ಲಿ ಯಜಮಾನನೊಂದಿಗೆ ಸಂಬಂಧ

೩. ಲಿಂಗ: ಪುರುಷ/ಮಹಿಳೆ

೪. ವಯೋಮಾನ: ೧೮–೨೯ [ ] ೨೯–೩೮ [ ] ೩೯–೪೫ [ ] ೪೯–೫೮ [ ] ೬೦ಕ್ಕಿಂತ ಹೆಚ್ಚು [ ]

೫. ಶಿಕ್ಷಣ ಮಟ್ಟ

ಅಶಿಕ್ಷಿತರು [ ] ಪ್ರಾಥಮಿಕ ವಿದ್ಯಾಭ್ಯಾಸ [ ] ಪ್ರೌಢ ಶಿಕ್ಷಣ [ ]

೬. ಪದವಿಪೂರ್ವ [ ] ಪದವಿ [ ] ಸ್ನಾತಕೋತ್ತರ [ ] ವೈವಾಹಿಕ ಸ್ಥಿತಿ :

ಮದುವೆಯಾಗಿದೆ [ ] ಮದುವೆಯಾಗಿಲ್ಲ [ ]

೭. ಮಕ್ಕಳು? ೧ ರಿಂದ ೨ [ ] ೩ ರಿಂದ ೪ [ ] ೫ ರಿಂದ ೬ [ ]

೮. ಕೌಟುಂಬಿಕ ಹಿನ್ನೆಲೆ : ಅವಿಭಕ್ತ ಕುಟುಂಬ [ ] ವಿಭಕ್ತ ಕುಟುಂಬ [ ]

೯. ನಿಮ್ಮ ವಿವಾಹ ಯಾವ ತೆರನಾಗಿತ್ತು?

ಸಂಪ್ರದಾಯಬದ್ಧ ವಿವಾಹ [ ] ಪ್ರೇಮ ವಿವಾಹ [ ]

ಅಂತರ್‌ಜಾತಿ ವಿವಾಹ [ ] ಇತರೆ [ ]

೧೦. ಕುಟುಂಬ ಇರುವ ವರ್ಗ

ಶ್ರೀಮಂತ ವರ್ಗ [ ] ಮದ್ಯಮ ವರ್ಗ [ ]

ಬಡವರ್ಗ [ ] ಬಡತನ ರೇಖೆಗಿಂತ ಕೆಳಗಿರುವ ವರ್ಗ [ ]

೧೧. ನಿಮಗೆ ಸ್ವಂತ ಮನೆ ಇದೆಯೇ?

ಹೌದು [ ] ಇಲ್ಲ [ ]

೧೨. ಕುಟುಂಬದ ಮುಖ್ಯಸ್ಥರು

ತಂದೆ [ ] ತಾಯಿ [ ] ಗಂಡ [ ]

ಅತ್ತೆ [ ] ಮಾವ [ ] ಮತ್ತಿತರರು [ ]

೧೩. ಕುಟುಂಬದ ಮುಖ್ಯಸ್ಥರು ಮಾಡುತ್ತಿರುವ ಉದ್ಯೋಗ

ಕೃಷಿ [ ] ವ್ಯಾಪಾರ [ ] ಕೂಲಿ [ ] ಸರಕಾರಿ ನೌಕರಿ [ ]

೧೪. ನಿಮ್ಮ ಆರೋಗ್ಯ ಹೇಗಿದೆ?

ಉತ್ತಮವಾಗಿದೆ [ ] ಮಧ್ಯಮವಾಗಿದೆ [ ] ಸಾಧರಣವಾಗಿದೆ [ ] ಸರಿಯಾಗಿಲ್ಲ [ ]

೧೫. ನಿಮ್ಮ ಊರಿನಲ್ಲಿ ಸರಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ ಇದೆಯೇ?

ಇದೆ [ ] ಇಲ್ಲ [ ]

೧೬. ಕಾಯಿಲೆಗೆ ತುತ್ತಾದಾಗ ಚಿಕಿತ್ಸೆ ಪಡೆಯಲು ಎಲ್ಲಿಗೆ ಹೋಗುತ್ತೀರಿ?

ಖಾಸಗಿ ಆಸ್ಪತ್ರೆ [ ] ಸರಕಾರಿ ಆಸ್ಪತ್ರೆ [ ] ಮನೆಯ ಔಷದಿ [ ] ಹೋಗುವುದಿಲ್ಲ [ ]

**ಸಾಮಾಜಿಕ ಮಾಹಿತಿ**

೧೭. ಮತ : ಹಿಂದೂ [ ] ಮುಸ್ಲಿಂ [ ] ಕ್ರಿಶ್ಚಿಯನ್ [ ] ಇತರರು [ ]

೧೮. ಜಾತಿ: ಸಾಮಾನ್ಯ ವರ್ಗ [ ] ಪರಿಶಿಷ್ಟ ಜಾತಿ [ ]

ಪರಿಶಿಷ್ಟ ಪಂಗಡ [ ] ಹಿಂದುಳಿದ ವರ್ಗ [ ]

೧೯. ಕೃಷಿ ಕೆಲಸ ನಮ್ಮ ಬದುಕಿನ ಸಂಸ್ಕೃತಿಯ ಒಂದು ಭಾಗ ಒಪ್ಪಿಕೊಳ್ಳುತ್ತೀರಾ?

ಹೌದು [ ] ಇಲ್ಲ [ ]

**ಉದ್ಯೋಗ ಮಾಹಿತಿ**

೨೦. ಕುಟುಂಬದ ವಾರ್ಷಿಕ ಆದಾಯ ಕೃಷಿಯಿಂದ

೬೦೦೦-೧೦೦೦೦ [ ] ೧೧೦೦೦-೧೫೦೦೦ [ ]

೧೬೦೦೦-೨೦೦೦೦ [ ] ೨೦೦೦೦ಕ್ಕಿಂತ ಹೆಚ್ಚು [ ]

೨೧. ಭೂ ಹಿಡುವಳಿ ಮತ್ತು ಬೆಲೆ

೧. ಮಾಹಿತಿದಾರರ ಭೂ ಹಿಡುವಳಿ ಗಾತ್ರ

ಸಣ್ಣ ಹಿಡುವಳಿದಾರ (೧ ಎಕ್ರೆಗಿಂತ ಕಡಿಮೆ) [ ]

ಮಧ್ಯಮ ಹಿಡುವಳಿದಾರ(೧ ರಿಂದ ೨ ಎಕ್ರೆ) [ ]

ದೊಡ್ಡ ಹಿಡುವಳಿದಾರ (೩ ಕ್ಕಿಂತ ಜಾಸ್ತಿ) [ ]

೨. ಹಿಡುವಳಿಯ ಮೂಲ

ಪಿತ್ರಾರ್ಜಿತ [ ] ಭೂ ಮಸೂದೆಯಿಂದ ಬಂದಿದ್ದು [ ] ಕ್ರಯಕ್ಕೆ ಪಡೆದುಕೊಂಡಿದ್ದು [ ]

೩. ಯಾವುದೇ ಕೃಷಿ ಭೂಮಿಯನ್ನು ಮಾರಿದ್ದೀರಾ?

ಹೌದು [ ] ಇಲ್ಲ [ ]

೪. ಹೌದಾದರೆ ಯಾವ ಉದ್ದೇಶಕ್ಕಾಗಿ ಮಾರಿದ್ದೀರಾ?

ಕೈಗಾರಿಕೆ [ ] ಕೃಷಿ [ ] ಕೃಷಿಯೇತರ [ ] ಇತರ [ ]

೫. ಬೆಳೆಯ ವಿಧಾನ

ಆಹಾರ ಬೆಳೆ [ ] ವಾಣಿಜ್ಯ ಬೆಳೆ [ ]

೬. ನೀವು ಯಾವ ರೀತಿಯ ಬೇಸಾಯ ಕ್ರಮ ಅನುಸರಿಸುತ್ತೀರಿ?

ಹಳೆಯ ಪದ್ಧತಿ [ ] ಹೊಸ ವೈಜ್ಞಾನಿಕ ಪದ್ಧತಿ [ ]

೨೨. ಕಳೆದ ಹತ್ತು ವರ್ಷಗಳಿಂದ ಕೃಷಿ ಭೂಮಿ ಕಡಿಮೆಯಾಗಿದೇಯೇ?

ಹೌದು [ ] ಇಲ್ಲ [ ]

೨೩. ಕಡಿಮೆಯಾಗುವುದಕ್ಕೆ ಕಾರಣ

ಕೈಗಾರಿಕೆ [ ] ನಗರೀಕರಣ [ ] ಜನಸಂಖ್ಯೆ ಹೆಚ್ಚಳ [ ]

ಸರಕಾರದ ನಿರ್ಲಕ್ಷ್ಯ [ ] ನೀರಾವರಿ ಸಮಸ್ಯೆ [ ]

೨೪. ಕೈಗಾರಿಕೆಯ ತ್ಯಾಜ್ಯಗಳು ನಿಮ್ಮ ಕೃಷಿಗೆ ಹಾನಿ ಮಾಡಿದೇಯಾ?

ಹೌದು [ ] ಇಲ್ಲ [ ]

೨೫. ರೈತರು ಎದುರಿಸುತ್ತಿರುವ ಸಮಸ್ಯೆಗಳು

ಭೂ ಹಿಡುವಳಿ ಗಾತ್ರ [ ] ಹಣದ ವ್ಯವಸ್ಥೆ[ ] ಕೈಗಾರಿಕೆಗಳು [ ]

ಕಾಮಿಕರ ಕೊರತೆ [ ] ಕಾರ್ಮಿಕರ ಕೊರತೆ [ ] ಮಾರುಕಟ್ಟೆ ಮತ್ತು ಸಾರಿಗೆ ವ್ಯವಸ್ಥೆ [ ]

೨೬. ೧೯೯೦ ರಲ್ಲಿ ಇದ್ದ ಕೃಷಿ ಭೂಮಿ________________ಎಕ್ರೆಗಳಲ್ಲಿ

೨೦೦೦ ರಲ್ಲಿ ಇದ್ದ ಕೃಷಿ ಭೂಮಿ________________ಎಕ್ರೆಗಳಲ್ಲಿ

೨೦೧೦ ರಲ್ಲಿ ಇದ್ದ ಕೃಷಿ ಭೂಮಿ________________ಎಕ್ರೆಗಳಲ್ಲಿ

೨೦೧೭ ರಲ್ಲಿ ಇದ್ದ ಕೃಷಿ ಭೂಮಿ________________ಎಕ್ರೆಗಳಲ್ಲಿ

೨೭. ಆಹಾರ ಬೆಳೆ ಸಮಸ್ಯೆಯ ಬಗ್ಗೆ ನಿಮಗೆ ತಿಳಿದಿದೆಯಾ?

ಹೌದು [ ] ಇಲ್ಲ [ ]

೨೮. ನಿಮ್ಮ ವೃತ್ತಿಯ ಉದ್ದೇಶ

ಆಸಕ್ತಿ [ ] ಆರ್ಥಿಕ ಒತ್ತಡ [ ] ಇತರ [ ]

೨೯. ನಿಮ್ಮ ವೃತ್ತಿಯಿಂದ ಆರ್ಥಿಕ ಬದಲಾವಣೆ ಆಗಿದೆಯೇ?

ಹೌದು [ ] ಇಲ್ಲ [ ]

೩೦. ನಿಮ್ಮ ಸೇವಾನುಭವ

೧-೫ ವರ್ಷ [ ] ೧೦-೨೫ ವರ್ಷ [ ] ೨೫ ವರ್ಷದಿಂದ ಮೇಲ್ಪಟ್ಟು [ ]

೩೧. ಕೈಗಾರಿಕೆಗಳಿಂದಾಗಿ ಆಹಾರೋತ್ಪನ್ನಗಳ ಉತ್ಪಾದಕತೆಯಲ್ಲಿ ಕಡಿಮೆಯಾಗಿದೆಯೇ?

ಹೌದು [ ] ಇಲ್ಲ [ ]

೩೨. ನಿಮ್ಮ ಪ್ರಕಾರ ಈಗಿನ ಯುವ ಪಿಳಿಗೆಗೆ ಕೃಷಿಯ ಮೇಲೆ ಆಸಕ್ತಿ ಇದೆಯೇ?

ಹೌದು [ ] ಇಲ್ಲ [ ]

೩೩. ಈಗಿನ ಪರಿಸ್ಥಿತಿಯಲ್ಲಿ ಯಾವ ಕೃಷಿ ಲಾಭದಾಯಕವಾಗಿದೆ?

ಆಹಾರ ಬೆಳೆಗಳು [ ] ವಾಣಿಜ್ಯ ಬೆಳೆಗಳು [ ]

೩೪. ಕೈಗಾರಿಕೆ ಕೃಷಿಗೆ ಪೂರಕವಾಗಿದೆಯೇ?

ಹೌದು [ ] ಇಲ್ಲ [ ]

೩೫. ರಾಸಾಯನಿಕ ಗೊಬ್ಬರ ಬಳಸುವುದರಿಂದ ಹೆಚ್ಚಿನ ಲಾಭದಾಯಕ ಕೃಷಿಯಲ್ಲಿ ಕಾಣಬಹುದಾಗಿದೆ?

ಹೌದು [ ] ಇಲ್ಲ [ ]

೩೬. ನಿಮ್ಮ ಪ್ರಕಾರ ಕೈಗಾರೀಕರಣದಿಂದಾಗಿ ಕೃಷಿಗೆ ಅಪಾಯವಿದೆಯೇ?

ಹೌದು [ ] ಇಲ್ಲ [ ]

೩೭. ಕೃಷಿ ಕಾರ್ಮಿಕರು ನಗರಗಳಿಗೆ ವಲಸೆ ಹೋಗಲು ಕಾರಣ

ಶಿಕ್ಷಣ [ ] ಉದ್ಯೋಗ [ ]

ಸಾರಿಗೆ ಸಂಪರ್ಕ [ ] ಇತರ [ ]

೩೮. ಕೈಗಾರೀಕರಣದಿಂದ ಕೃಷಿಯ ಮೇಲೆ ಆಗುವ ಪರಿಣಾಮ

ಕೃಷಿ ಭೂಮಿ ಕಡಿಮೆಯಾಗುವುದು [ ] ಕೃಷಿ ಕಾರ್ಮಿಕರ ಕೊರತೆ [ ]

ನೀರಾವರಿ ಕೊರತೆ [ ] ಆಹಾರೋತ್ಪನ್ನಗಳ ಕೊರತೆ [ ]

೩೯. ಕೃಷಿಯಲ್ಲಿ ವೈಜ್ಞಾನಿಕ ಪದ್ದತಿಯ ಬಗ್ಗೆ ನಿಮಗೆ ತಿಳಿದಿದೆಯಾ?

ಹೌದು [ ] ಇಲ್ಲ [ ]

೪೦. ಯಾವ ರೀತಿಯಿಂದ ಆರ್ಥಿಕ ಸುಧಾರಣೆಯಾಗಿದೆ?

ಕೌಟುಂಬಿಕ ಜೀವನ ಮಟ್ಟ ಸುಧಾರಣೆ [ ]

ಶಿಕ್ಷಣ ಮಟ್ಟದಲ್ಲಿ ಸುಧಾರಣೆ [ ]

ಹೊಸ ಭೂಮಿ ಖರೀದಿ [ ]

೪೧. ಮಾರುಕಟ್ಟೆ ವ್ಯವಸ್ಥೆಯ ಬಗ್ಗೆ ನಿಮಗೆ ತಿಳಿದಿದೆಯಾ?

ಹೌದು [ ] ಇಲ್ಲ [ ]

೪೨. ಕೃಷಿ ಸಾಲ ಸೌಲಭ್ಯದ ಬಗ್ಗೆ ನಿಮಗೆ ತಿಳಿದಿದೆಯಾ?

ಹೌದು [ ] ಇಲ್ಲ [ ]

೪೩. ಕೃಷಿಯಿಂದ ಆರ್ಥಿಕ ಸುಧಾರಣೆಯಾಗಿದೆಯೇ?

ಹೌದು [ ] ಇಲ್ಲ [ ]

೪೪. ಕೃಷಿ ಉತ್ಪನ್ನಗಳ ಸಬ್ಸಿಡಿಗಳ ಬಗ್ಗೆ ನಿಮಗೆ ತಿಳಿದಿದೆಯಾ?

ಹೌದು [ ] ಇಲ್ಲ [ ]

೪೫. ಕೃಷಿ ಉತ್ಪನ್ನಗಳಿಗೆ ಉತ್ತಮವಾದ ಬೇಡಿಕೆಯಿದೇ?

ಹೌದು [ ] ಇಲ್ಲ [ ]

೪೬. ಸರಕಾರವು ನಿಮಗೆ ಕೃಷಿಗೆ ಬೇಕಾದ ರಸಗೊಬ್ಬರಗಳು ಸರಿಯಾದ ವ್ಯವಸ್ಥೆಯಲ್ಲಿ ನಿಮಗೆ ಸಿಗುತ್ತಿದೆಯೇ?

ಹೌದು [ ] ಇಲ್ಲ [ ]

೪೭. ಸಾರಿಗೆ ವ್ಯವಸ್ಥೆ ಇದೆಯೇ?

ಹೌದು [ ] ಇಲ್ಲ [ ]

೪೮. ಕೃಷಿ ತಳಿ ಬದಲಾವಣೆಯಿಂದ ಇಳುವರಿ ಹೆಚ್ಚಾಗಿದೆಯೇ?

ಹೌದು [ ] ಇಲ್ಲ [ ]

೪೯. ೧೯೯೦ ರಿಂದ ೨೦೧೭ ವರೆಗೆ ಕೃಷಿ ಬದಲಾವಣೆಯಿಂದ ಆರ್ಥಿಕ ಪ್ರಗತಿಯಾಗಿದೆಯೇ?

ಹೌದು [ ] ಇಲ್ಲ [ ]

೫೦. ಕೈಗಾರಿಕೆಗಳಿಂದ ಕೃಷಿ ಕಾರ್ಮಿಕರ ಕೊರತೆಯಾಗಿದೆ?

ಹೌದು [ ] ಇಲ್ಲ [ ]

೫೧. ಕೈಗಾರಿಕೆಯಿಂದ ಕೃಷಿ ನೀರಿಗೆ ಸಮಸ್ಯೆಯಾಗಿದೆಯೇ?

ಹೌದು [ ] ಇಲ್ಲ [ ]

೫೨. ಕೃಷಿಯಿಂದ ದೂರ ಹೋಗುತ್ತಿರಲು ಕಾರಣ?

ಜಾಗತೀಕರಣದ ಪ್ರಭಾವ [ ] ನಗರೀಕರಣ ಪ್ರಭಾವ [ ]

ಶಿಕ್ಷಣದ ಪ್ರಭಾವ [ ] ಸರಕಾರದ ಸೌಲಭ್ಯ [ ]

೫೩. ನಿಮ್ಮ ಕೃಷಿ ಪದ್ದತಿ

ಒಣ ಬೇಸಾಯ [ ] ನೀರಾವರಿ ಬೇಸಾಯ [ ]

೫೪. ಕೃಷಿ ಭೂಮಿಯನ್ನು ನೀವು ತೋಟಗಾರಿಕೆಗಾಗಿ ಪರಿವರ್ತಿಸಿದ್ದೀರಾ?

ಹೌದು [ ] ಇಲ್ಲ [ ]

೫೫. ಕೃಷಿ ಶೇಖರಣಾ ವ್ಯವಸ್ಥೆಯ ಬಗ್ಗೆ ನಿಮಗೆ ತಿಳಿದಿದೆಯೇ?

ಹೌದು [ ] ಇಲ್ಲ [ ]

೫೬. ಎಷ್ಟು ವರ್ಷದಿಂದ ಕೃಷಿಯನ್ನು ಉದ್ಯೋಗವಾಗಿ ಮಾಡುತ್ತಿದ್ದಿರಿ?

೧-೫ ವರ್ಷ [ ]   ೫-೧೦ ವರ್ಷ [ ]   ೧೦-೨೦ ವರ್ಷ [ ]   ೨೦ಕ್ಕಿಂತ ಹೆಚ್ಚು [ ]

೫೭. ವ್ಯವಸ್ಥೆಯಲ್ಲಿ ಆರ್ಥಿಕ ವೆಚ್ಚ ಹೆಚ್ಚಾಗಿದೆ?

ಹೌದು [ ]   ಇಲ್ಲ [ ]

೫೮. ಕೃಷಿ ಲಾಭದಾಯಕ ವಲಯ

ಹೌದು [ ]   ಇಲ್ಲ [ ]

೫೯. ಕೃಷಿ ಮಹತ್ವ ಕುಗ್ಗುತ್ತಿರಲು ಕಾರಣ

ಜಾಗತೀಕರಣ [ ]   ನಗರೀಕರಣ [ ]   ಶಿಕ್ಷಣ [ ]   ಕಾರ್ಮಿಕರ ಕೊರತೆ [ ]

೬೦. ಕೃಷಿಯ ತಳಿಗಳು

ಎಕ ತಳಿ [ ]   ಮಿಶ್ರ ತಳಿ [ ]   ದ್ವಿದಳ ದಾನ್ಯ [ ]   ಭತ್ತ ಇತ್ಯಾದಿ [ ]

೬೧. ನಿಮ್ಮ ಉದ್ಯೋಗ

ಕೃಷಿ ಕಾರ್ಮಿಕರು [ ]   ಖಾಸಗಿ ಕೆಲಸ [ ]   ಸರಕಾರಿ ಕೆಲಸ [ ]

೬೨. ನೀವು ಯಾವ ಪಡಿತರ ಚೀಟಿಯನ್ನು ಹೊಂದಿದ್ದೀರಾ?

ಎ.ಪಿ.ಎಲ್. [ ]   ಬಿ.ಪಿ.ಎಲ್ [ ]   ಅಂತ್ಯೋದಯ [ ]   ಇತರೆ [ ]

# ಗ್ರಂಥಋಣ

## ಕನ್ನಡ:


- ಅಬ್ದುಲ್ ಅಜೀಜ್, ವಾಸುಕಿ ಕೆ.ಜಿ. ೨೦೦೦ "ಕರ್ನಾಟಕದ ಆರ್ಥಿಕತೆ" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಎ.ಎಚ್.ಮಹೇಂದ್ರ ೧೯೯೮ "ಕರ್ನಾಟಕದಲ್ಲಿ ಕೃಷಿ ಮತ್ತು ನೀರಾವರಿ" ಚೈತ್ರ ಪ್ರಕಾಶನ ಬೆಂಗಳೂರು.
- ಎನ್. ಗೋಪಾಲಕೃಷ್ಣ ೨೦೦೩ "ಕೃಷಿ ಮತ್ತು ಪರಿಸರ" ಟ್ರಸ್ಟಿ ಪ್ರಕಾಶನ ಬೆಂಗಳೂರು.
- ಕೃಷ್ಣಯ್ಯ ಗೌಡ ಎಚ್.ಆರ್. ೨೦೦೯ "ಕೃಷಿ ಅರ್ಥಶಾಸ್ತ್ರ" ವಿದ್ಯಾನಿಧಿ ಪ್ರಕಾಶನ ಗದಗ
- ಕರ್ನಾಟಕ ಸರಕಾರ ಉಡುಪಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೧೧-೧೨ ಜಿಲ್ಲಾ ಸಂಗ್ರಹಣಾಧಿಕಾರಿ ಉಡುಪಿ.
- ಕರ್ನಾಟಕ ಸರಕಾರ ಕುಂದಾಪುರ ತಾಲೂಕಿನ ಅಂಕಿ-ಅಂಶಗಳ ನೋಟ ೨೦೧೧-೧೨, ತಾಲೂಕು ಕಚೇರಿ ಕುಂದಾಪುರ.
- ಚಂದ್ರ ಪೂಜಾರಿ ಎಂ. ೨೦೧೧ "ಸಂಶೋದನೆ ಏನು? ಏಕೆ? ಹೇಗೆ?" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಚಂದ್ರಶೇಖರ್ ಟಿ.ಆರ್. ೨೦೧೦ "ಲಿಂಗ ಸಂಬಂಧಗಳು ಮತ್ತು ಅಭಿವೃದ್ದಿ" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಚಂದ್ರಶೇಖರ್ ಟಿ.ಆರ್. "ಹಕ್ಕು ಹಂಗು" ಅಭಿವೃದ್ದಿ ಅಧ್ಯಯನದ ಪ್ರಬಂಧಗಳು. (೨೦೧೦)
- ಜಿ.ಎನ್.ಕೆಂಪಯ್ಯ ೧೯೯೯ "ಭಾರತದ ಆರ್ಥಿಕ ಅಭಿವೃದ್ದಿ" ಚೈತ್ರ ಪ್ರಕಾಶನ ಬೆಂಗಳೂರು.
- ಜಿ.ಎನ್.ಕೆಂಪಯ್ಯ ೨೦೦೫ "ಭಾರತದಲ್ಲಿ ಕೃಷಿ" ಚೈತ್ರ ಪ್ರಕಾಶನ ಬೆಂಗಳೂರು.
- ಡಾ. ಸ.ಚಿ. ರಮೇಶ್ ೨೦೦೮ "ಕೃಷಿ ಪಾರಂಪರಿಕ ಜ್ಞಾನ" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಡಾ. ಚಂದ್ರ ಪೂಜಾರಿ ಪುಟ ಸಂಖ್ಯೆ ೧೦೭ "ಕೃಷಿ ಮಾರುಕಟ್ಟೆ" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಡಾ. ಎಂ.ಜಿ. ಈಶ್ವರಪ್ಪ ೨೦೦೧ "ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ" ವಿದ್ಯಾನಿಧಿ ಪ್ರಕಾಶನ ಗದಗ.

- ಡಾ. ಎಚ್. ಆರ್. ಕೃಷ್ಣಯ್ಯ ಗೌಡ ೨೦೦೯ "ಕರ್ನಾಟಕ ಆರ್ಥಿಕತೆ" ಸ್ಪಂದನ ಪ್ರಕಾಶನ ಬೆಂಗಳೂರು.
- ಡಾ.ಸೋಮಣ್ಣ ಮಂಟಪ ಮಾಲೆ ೨೦೮ "ವ್ಯವಸಾಯ ಸಂಬಂದಿ ಆಚರಣೆಗಳು" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಡಾ. ಎಚ್.ಎಸ್. ದೊರೆಸ್ವಾಮಿ ೨೦೦೨ "ಭಾರತದ ಆರ್ಥಿಕ ನೀತಿ" ಸ್ವಪ್ನ ಬುಕ್ ಹೌಸ್ ಬೆಂಗಳೂರು.
- ಡಾ.ಎನ್.ಟಿ.ಸೋಮಶೇಖರ ೨೦೦೮ "ಕರ್ನಾಟಕದ ಆರ್ಥಿಕತೆ" ಚೈತ್ರ ಪ್ರಕಾಶನ ಬೆಂಗಳೂರು.
- ನಾಗೇಶ ಹೆಗ್ಡೆ ೨೦೦೩ "ಅಭಿವೃದ್ದಿಯ ಅಂಧಯುಗ" ಭೂಮಿ ಬುಕ್ಸ್ ಬೆಂಗಳೂರು.
- ನಾಗೇಶ ಹೆಗಡೆ ೨೦೦೯ "ಅಭಿವೃದ್ದಿ ಅಂಧಯುಗ" ಭೂಮಿ ಬುಕ್ಸ್ ಪ್ರಕಾಶನ ಬೆಂಗಳೂರು.
- ಪ್ರೋ.ಎಂ.ಪಿ. ಬಿರಾದರ ಮಂಟಪ ಮಾಲೆ ೧೮೦ "ರೈತರ ಆತ್ಮಹತ್ಯೆ ಪ್ರಕರಣಗಳು" ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ ಹಂಪಿ.
- ಪ್ರೋ.ಎಂ.ವಿ. ನಾಡಕಣಿ "ಕೃಷಿ ಮತ್ತು ಪರಿಸರ ಹೊಸ ಸವಾಲುಗಳು" (ಹೊಸತು ಜನವರಿ ೨೦೦೧ ವಿಶೇಷ ಸಂಚಿಕೆ)
- ಪ್ರೀತಮ್ ಶೆಟ್ಟಿ ಕೆ. "ಕೃಷಿ ಮೇಲೆ ಜಾಗತೀಕರಣ ಪ್ರಭಾವ – ಮಂಗಳೂರು ತಾಲೂಕಿನ ಪ್ರಕರಣಗಳು" ಅಭಿವೃದ್ದಿ ಅಧ್ಯಯನದ ನಿಬಂಧ (೨೦೦೩)
- ವೆಂಕಟೇಶ ರಾವ್ ಬಿ.ವಿ. ೨೦೦೨ "ಕೃಷಿ" ನವಕರ್ನಾಟಕ ಪ್ರಕಾಶನ ಮಂಗಳೂರು.
- ಶಶಿಧರ ಹೆಗ್ಡೆ ೨೦೦೦ "ಕೃಷಿ ಅಭಿಪ್ರಾಯ" ವಿದ್ಯಾನಿಧಿ ಪ್ರಕಾಶನ ಗದಗ
- ಶ್ರೀಮತಿ ಸುಶೀಲ "ಕುಗ್ಗುತ್ತಿರುವ ಕೃಷಿ ಚಟುವಟಿಕೆಗಳಿಂದಾಗಿ ಜನ ಜೀವನದ ಮೇಲಾಗುತ್ತಿರುವ ಆರ್ಥಿಕ, ಸಾಮಾಜಿಕ ಪರಿಣಾಮಗಳು ಒಂದು ಅಧ್ಯಯನ ಬ್ರಹ್ಮಾವರದ ೮ ಗ್ರಾಮಗಳು ಅಭಿವೃದ್ದಿ" ಅಧ್ಯಯನದ ನಿಬಂಧ (೨೦೧೦).
- ಹನೂಫ್ ಬಿ.ಎನ್. "ಕೃಷಿ ಕ್ಷೇತ್ರದಲ್ಲಿ ಜಾಗತೀಕರಣದ ಪ್ರಭಾವ–ದಾವಣಗೆರೆ ಜಿಲ್ಲೆಗೆ ಸೀಮಿತಗೊಳಿಸಿ ಒಂದು ವಿಮರ್ಷಕ ಅಧ್ಯಯನ" ಅಭಿವೃದ್ದಿ ಅಧ್ಯಯನದ ನಿಬಂಧ (೨೦೦೦)

## English:


- Agarwal A.N. 2005 Indian Economy "Problem of Development and Planning" Vishwa Prakashana New Delhi.
- Dutt Rudor and Sundaram KPM 2008, "Indian Economy" S.Chanda and Company limited New Delhi.
- Jain S.C. 1971 "Principles and Practices of Agriculture Marketing and Prices" Vora & Co. Publishes Pvt. Ltd Mumbai.
- Sen Gupta Shivani 2004, "Indian Agriculture" ABD Publishers Jaipur
- Singh Ramesh, 2008 "Indian Economy" Tata Mcgrow Hill publishing co. Ltd New Delhi.


## Websites


- Census 2011 data – census India.gov.in
- District of Karnataka – Districts of a Glance
- https://brainly.in/question/27413
- https://en.m.wikipedia.org/wiki/kundapura
- https://en.m.wikipedia.org/.../
- https://en.m.wikipedia.org/wiki/karnataka
- https://anikethana.org
- Kundapura Karnataka Wikipedia